# ಸಂಶೋಧನ ವಿಧಾನ

ಡಾ|| ಪ್ರ. ವಿ. ಕುಲಕರ್ಣಿ
ಡಾ|| ಹರಿಕೃಷ್ಣ ಭರಣ್ಯ
ಬಿ. ಸದಾಶಿವ, ಎಂ.ಎ., ಎಂ.ಫಿಲ್.,



ಪ್ರಭಸ ಬಿಡುಗಡೆ ೧೯೮೯ ಮದುರೈ

# ಸಂಶೋಧನ ವಿಧಾನ



ಡಾ|| ಪ್ರ. ವಿ. ಕುಲಕರ್ಣಿ
ಡಾ|| ಹರಿಕೃಷ್ಣ ಭರಣ್ಯ
ಬಿ. ಸದಾಶಿವ, ಎಂ.ಎ., ಎಂ.ಫಿಲ್.,

ಪ್ರಭಸ ಬಿಡುಗಡೆ ೧೯೮೯ ಮದುರೈ

**SamShoodhana Vidhaana** : Research Methodology in Kannada Language and Literature, Compiled by *Dr. P. V. Kulkarni*, M.A., Ph.D., *Dr. B. Harikrishna Bhat*, M.A., M.Phil., Ph D., and *Sri B. Sadashiva*. M.A., M.Phil., and Published by the Prabhasa Bidugade, Madurai, 1989.



P.P. 70+20+4



Price : **Rs. 20/-**

ಸಂಶೋಧನ ವಿಧಾನ : ಕನ್ನಡ ಸಾಹಿತ್ಯ ಹಾಗೂ ಭಾಷೆಗಳ ಸಂಶೋಧನ ವಿಧಾನದ ಪುಸ್ತಕ. ಲೇಖಕರು : ಡಾ॥ ಪ್ರ. ವಿ. ಕುಲಕರ್ಣಿ, ಡಾ॥ ಹರಿಕೃಷ್ಣಭಟ್ ಭರಣ್ಯ ಹಾಗೂ ಶ್ರೀ ಬಿ. ಸದಾಶಿವ. ಪ್ರಭಸ ಬಿಡುಗಡೆ ಮದುರೈ ೧೯೮೯, ಪುಟಗಳು 94.



ಬೆಲೆ : ರೂ. ಇಪ್ಪತ್ತು ಮಾತ್ರ

ಈ ಪುಸ್ತಕ ದೊರೆಯುವ ಸ್ಥಳ :

1. No. 19, Type II Quarters
   Madurai Kamaraj University Campus
   Palkalainagar, Madurai - 625 021

2. B. Sadashiva
   Lecturer Dept. of Kannada
   Govt. College, Kasaragod, Vidyanagar - 670 123

ಮುದ್ರಕರು :
ಶ್ರೀ ಲಕ್ಷ್ಮೀ ಪ್ರಿಂಟಿಂಗ್ ವರ್ಕ್ಸ್
ಬೆಂಗಳೂರು – 560 004

# ಲೇಖಕರ ಮಾತು

ಸಂಶೋಧನೆ ಎಂದರೆ ಹೊಸತಾಗಿ ಹೇಳುವುದು ಎಂದರ್ಥವಾಗಿರುವುದಾದರೂ ಸಂಶೋಧನೆಯ ವಿಧಾನದ ಬಗೆಗೆ ಹೇಳುವುದೆಂದರೆ ಆ ವಿಧಾನವನ್ನು ಕ್ರಮಬದ್ಧವಾಗಿ ಜೋಡಿಸಿ ಹೇಳುವುದು ಎಂದರ್ಥವಾದೀತು. ಆ ನಿಟ್ಟಿನಲ್ಲಿ ನಮ್ಮದು ಇದೊಂದು ಪುಟ್ಟ ಹೆಜ್ಜೆ. ಕನ್ನಡದಲ್ಲಿ ಸಂಶೋಧನೆ ನಡೆಸುವವರಿಗೆ ವಿಧಾನವನ್ನು ತಿಳಿಯ ಹೇಳುವ ಪುಸ್ತಕಗಳು ಇಲ್ಲವೆಂದೇ ಅರ್ಥವಲ್ಲ. ಕನ್ನಡ ಸಾಹಿತ್ಯ/ಭಾಷೆ, ಜನಪದ ಮೊದಲಾದ ವಿಚಾರಗಳಿಗೆ ಒತ್ತುಕೊಟ್ಟು ಆ ನಿಟ್ಟಿನಿಂದ ಸಂಶೋಧನೆ ನಡೆಸುವುದನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಕೃತಿರಚನೆಗೆ ಕೈಹಾಕಿದ್ದೇವೆ.

ಇದಕ್ಕಿರುವ ಇನ್ನೊಂದು ಕಾರಣ, ಇಲ್ಲಿನ ಎಂ.ಫಿಲ್., (ಡಾಕ್ಟರೇಟ್ ಪೂರ್ವ ಸಂಶೋಧನ ಪದವಿ) ವಿದ್ಯಾರ್ಥಿಗಳಿಗೆ (Research Methodology) ಸಂಶೋಧನ ಶಾಸ್ತ್ರವನ್ನು ಪಾಠ ಮಾಡಬೇಕಾದ ಸಂದರ್ಭ ಬಂದಾಗ, ಸಾಮಾನ್ಯವಾಗಿ ಹೆಚ್ಚಿನ ಕಡೆಗಳಲ್ಲಿ ನಡೆಸುವಂತೆ ಇಂಗ್ಲೀಷ್ ಭಾಷೆಯಲ್ಲಿರುವ 'ಮೆಥಡಾಲಜಿ' ಪುಸ್ತಕಗಳಿಗೆ ಮಾರುಹೋಗಬೇಕಾಗಿ ಬಂದಿತ್ತು. ಹೀಗೆ ಮಾಡುವಾಗ ಕನ್ನಡ ಸಾಹಿತ್ಯ, ಜಾನಪದ ಹಾಗೂ ಭಾಷೆಗಳಿಗೆ ಸಂಬಂಧಪಡದೇ ಇರುವ ವಿಚಾರಗಳೆಷ್ಟೋ ಪ್ರಕೃತ ಅನಗತ್ಯವೆಂಬಂತೆಯೂ ಕಂಡುಬಂದಿತ್ತು. ಅಲ್ಲದೆ, ಇದರೊಂದಿಗೆ ತಮಿಳಿನಲ್ಲಿ ಪ್ರಕಟವಾಗಿರುವ ವಿಧಾನ ಶಾಸ್ತ್ರದ ಗ್ರಂಥಗಳನ್ನು ಅಭ್ಯಸಿಸಿದಾಗಲೂ ಅವು ಇಂಗ್ಲೀಷಿನಲ್ಲಿ ರಚಿಸಲಾದ ಗ್ರಂಥಗಳನ್ನೇ ಹೋಲುವುದು ಕಂಡುಬರುತ್ತವೆ. ಹೀಗಾಗಿ, ಕನ್ನಡದಲ್ಲಿ ಭಾಷೆ, ಸಾಹಿತ್ಯ ಹಾಗೂ ಜಾನಪದ ವಿಷಯಕ್ಕೆ ಸಂಬಂಧಿಸಿದ ಸಂಶೋಧನ ವಿಧಾನದ ಗ್ರಂಥವೊಂದರ ಅಗತ್ಯದ ಅರಿವಾಗಿ, ಇಂಗ್ಲೀಷ್, ಕನ್ನಡ ಹಾಗೂ ತಮಿಳು ಮೊದಲಾದ ಭಾಷೆಗಳಲ್ಲಿ ಲಭ್ಯವಿರುವ ವಿಧಾನಶಾಸ್ತ್ರಗಳನ್ನೂ ದೃಷ್ಟಿಯಲ್ಲಿರಿಸಿಕೊಂಡು ಈ ಪ್ರಯತ್ನಕ್ಕೆ ಕೈಹಾಕಿದ್ದೇವೆ.

ಸಂಶೋಧನ ಕ್ಷೇತ್ರಕ್ಕೆ ಹೊಸದಾಗಿ ಅಡಿಯಿಡುತ್ತಿರುವವರನ್ನು ದೃಷ್ಟಿಯಲ್ಲಿರಿಸಿಕೊಂಡು, ಅವರಿಗೆ ಪ್ರಾಥಮಿಕವಾಗಿ ಸಂಶೋಧನೆಯ ಬಗೆಗೆ ಸೂಚಿಸುತ್ತಾ ಅವರು ಅನುಸರಿಸಬೇಕಾದ ಹೆಜ್ಜೆಗಳನ್ನು ಹಂತ ಹಂತವಾಗಿ, ಸರಳ ರೀತಿಯಿಂದ ತಿಳಿಸುವುದರೊಂದಿಗೆ, ಅನುಬಂಧಗಳಲ್ಲಿ ಹಲವಾರು ಮಾದರಿಗಳನ್ನೂ ಕೊಡುವ ಪ್ರಯತ್ನ ಮಾಡಿದ್ದೇವೆ. (ಇದರೊಂದಿಗೆ ಕನ್ನಡದ ಭಾಷೆ ಹಾಗೂ ಸಾಹಿತ್ಯಗಳ ಬಗೆಗೆ ಬೇರೆ ಬೇರೆ ಕೇಂದ್ರಗಳಲ್ಲಿ ನಡೆಸಿದ ಮತ್ತು ನಡೆಸುತ್ತಿರುವ ಸಂಶೋಧನೆಗಳನ್ನು ಅಧ್ಯಯನ ಮಾಡಬೇಕಾಗಿರುವ ಅಗತ್ಯವಿದೆ. ಆದರೆ ಅದನ್ನು ಸದ್ಯಕ್ಕೆ ನಡೆಸಿಲ್ಲವೆನ್ನುವ ಖೇದವೂ

ನಮಗಿದೆ.) ಸಂಶೋಧನೆ ಎಂಬ ಪದಕ್ಕೆ ಕನ್ನಡದಲ್ಲಿ ಸರಿಯಾದ ಹಾಗೂ ಸಂವಾದಿ ಪದ 'ಆರಯಿಕೆ' ಎಂದಾಗುತ್ತದೆ. ಆರಯ್, ಅರಯ್ಸು, ಎಂದರೆ ಹುಡುಕು, ಸಂಶೋಧಿಸು, to investigate, to search to (ಕಿಟ್ಟೆಲ್ I 166) ಇತ್ಯಾದಿ ಅರ್ಥಗಳಿವೆ. ತಮಿಳಿನಲ್ಲಿ ಸಂಶೋಧನೆಗೆ 'ಆರಾಯ್ಚಿ' ಎಂದೇ ಕರೆಯುತ್ತಾರೆ. ಕನ್ನಡದ್ದೇ ಆದ ಪದವನ್ನು ಹೆಚ್ಚು ಚಲಾವಣೆಗೆ ತರಬಹುದು ಎಂಬ ಉದ್ದೇಶವಿದ್ದರೆ ಆರಯಿಕೆ ಎಂಬ ಪದವನ್ನು ನಮ್ಮಲ್ಲೂ ಬಳಸಬಹುದು.

ಈ ಹೊತ್ತಗೆಯು ಭಾಷೆ ಹಾಗೂ ಸಾಹಿತ್ಯಗಳ ಸಂಶೋಧಕರಿಗೆ ಕಿಂಚಿತ್ತಾದರೂ ಉಪಯೋಗವಾದೀತೆಂಬ ಅನಿಸಿಕೆ ನಮ್ಮದು. ಅಂತೆಯೇ ಇದು ಪರಿಪೂರ್ಣವಾಗಿಯೇ ಇದೆ ಎಂಬ ಭಾವನೆ ಸರ್ವಥಾ ನಮ್ಮಲ್ಲಿಲ್ಲ. ಇದರಲ್ಲಿನ ಕುಂದು-ಕೊರತೆಗಳನ್ನು ನಿವಾರಿಸಲು ಅಥವಾ ಸರಿಪಡಿಸಲು ವಿದ್ವಾಂಸರೂ, ಸಂಶೋಧಕರೂ ಸಹಕರಿಸುತ್ತಾರೆಂದು ನಂಬುತ್ತೇವೆ.

ಈ ಸಂಶೋಧನಾ ವಿಧಾನ ಕೃತಿಯನ್ನು ರಚಿಸುವಲ್ಲಿ ಅನೇಕ ರೀತಿಯಿಂದ ಪ್ರೋತ್ಸಾಹಿಸಿ ಸಲಹೆಗಳನ್ನೂ, ಸಹಕಾರಗಳನ್ನೂ ನೀಡುತ್ತಲೇ ಬಂದಿರುವ ಡಾ॥ ಪಾ. ಶ. ಶ್ರೀನಿವಾಸ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಅಲ್ಲದೆ ಈ ನಿಟ್ಟಿನಿಂದ ಸಹಕರಿಸಿದ ಎಲ್ಲ ಮಿತ್ರರಿಗೂ, ಸುಂದರವಾಗಿ ಮುದ್ರಿಸಿದ ಶ್ರೀ ಲಕ್ಷ್ಮೀ ಪ್ರಿಂಟಿಂಗ್ ವರ್ಕ್ಸ್‌ನವರಿಗೂ, ಇದರ ಪೂರ್ತಿ ಜವಾಬ್ದಾರಿಯನ್ನು ವಹಿಸಿ ನಡೆಸಿಕೊಟ್ಟ ಮಿತ್ರರಾದ ಡಾ॥ ಬಿ. ಎಸ್. ಸುಬ್ಬರಾವ್ ಅವರಿಗೂ ನಮ್ಮ ಹಾರ್ದಿಕ ಕೃತಜ್ಞತೆಗಳು.

ಮದುರೈ
10-6-1989

**ಪ್ರ. ವಿ. ಕುಲಕರ್ಣಿ**
**ಹರಿಕೃಷ್ಣ ಭರಣ್ಯ**
**ಬಿ. ಸದಾಶಿವ**

# ಪರಿವಿಡಿ





—

# 1. ಸಂಶೋಧನೆ ಮತ್ತು ವೈಜ್ಞಾನಿಕ ರೀತಿ

## 1.1 ಸಂಶೋಧನೆಗೆ ಬರುವ ವಿದ್ಯಾರ್ಥಿಗಳು :

ಸಾಮಾನ್ಯವಾಗಿ ಸಂಶೋಧನೆ ನಡೆಸಲು ಬರುವ ವಿದ್ಯಾರ್ಥಿಗಳು ಆಯಾ ಕ್ಷೇತ್ರಗಳಲ್ಲಿ ಎಂ.ಎ., ಎಂ.ಫಿಲ್., ಪದವಿಯನ್ನು ಮುಗಿಸಿ ಬಂದವರಾಗಿರುತ್ತಾರೆ. ಎಂ.ಫಿಲ್. ಮುಗಿಸಿ ಬಂದವರಿಗೆ ಸಂಶೋಧನೆಯ ಬಗೆಗೆ ಒಂದು ಪ್ರಾಥಮಿಕ ಕಲ್ಪನೆ ಇದ್ದು, ತಾವು ಕೈಗೊಳ್ಳುವ ಕಾರ್ಯದ ಬಗೆಗೆ ವಿಷಯ ಸಂಗ್ರಹಣಾ ವಿಧಾನ ತಿಳಿದಿರುತ್ತದೆ. ಆದರೆ ಎಂ.ಎ. ಮುಗಿಸಿ ನೇರವಾಗಿ ಬರುವ ವಿದ್ಯಾರ್ಥಿಗಳಿಗೆ ಇದರ ಪೂರ್ವಕಲ್ಪನೆ ಅಷ್ಟಾಗಿ ಇರುವುದಿಲ್ಲವಾಗಿ ಅವರುಗಳು ಆರಂಭ ಕಾಲದಲ್ಲಿ ಮಾರ್ಗದರ್ಶಿಗಳ ಸಲಹೆಯನ್ನು ಹೆಚ್ಚಾಗಿ ಪಡೆಯಬೇಕಾಗುತ್ತದೆ. ಸಂಶೋಧನೆಗೆ ಸಂಬಂಧಪಟ್ಟಂತೆ ಬಂದಿರುವ ವಿಧಿ-ವಿಧಾನಗಳ ಪುಸ್ತಕಗಳನ್ನೂ ಓದಿ ತಿಳಿದು ಕೊಳ್ಳಬೇಕಾಗುತ್ತದೆ. ಎಂ.ಫಿಲ್. ಪದವಿ ಪಡೆಯುವುದು ಒಂದು ರೀತಿಯಲ್ಲಿ ಪಿಎಚ್.ಡಿ. ಗೆ ಪೂರ್ವ ನಿಯೋಜಿತ ತರಬೇತಿ ಇದ್ದಂತೆ. ಕೆಲಸ ಸುಗಮವಾಗುತ್ತದೆ. ವಿಧಿ, ವಿಧಾನಗಳು, ಕ್ರಮ, ನಿರೂಪಣೆಯ ಬಗೆಗೆ ಸ್ಪಷ್ಟ ಕಲ್ಪನೆ ಉಂಟಾಗಿರುವುದರಿಂದ ಎಂ.ಎ. ಮಾಡಿ ನೇರವಾಗಿ ಸಂಶೋಧನೆಯಲ್ಲಿ ತೊಡಗುವವರಿಗೆ ಉಂಟಾಗುವ ಗೊಂದಲಮಯ ಪರಿಸ್ಥಿತಿ, ಅಸಂದಿಗ್ಧ ವಾತಾವರಣ ಇರುವುದಿಲ್ಲ. ಸಂಶೋಧನೆಯಲ್ಲಿ ಪರಿಶ್ರಮ ಪೂರ್ವಕವಾದ ಪ್ರತಿಭೆಗೆ ಬೆಲೆಯೇ ಹೊರತು, ಪ್ರತಿಭೆಗೆ ಮಾತ್ರವೇ ಅಲ್ಲ. ಆದುದರಿಂದ ವಿಶ್ವವಿದ್ಯಾನಿಲಯದ ನಿಯಮಾವಳಿಗೆ ಒಳಪಟ್ಟಂತೆ ಆಸಕ್ತಿಯಿರುವ ಯಾವುದೇ ವಿದ್ಯಾರ್ಥಿಗಳೂ ತಮಗೆ ಅಭಿರುಚಿಯಿರುವ ಸಮಸ್ಯೆಗಳನ್ನು ಆರಿಸಿಕೊಂಡು ಸಂಶೋಧನೆ ನಡೆಸಲು ಅರ್ಹರಾಗಿರುತ್ತಾರೆ.

## 1.2 ಸಂಶೋಧನೆ ಮತ್ತು ಅದರ ಅರ್ಥವ್ಯಾಪ್ತಿ :

ಸಂಶೋಧನೆ ಎಂದರೆ ಸಮ್ಯಕ್‌ಶೋಧನೆ ಎಂದಾಗುತ್ತದೆ. ಕ್ರಮಬದ್ಧವಾಗಿ ಶೋಧಿಸು ಎಂದು ಇದರ ಅರ್ಥ. ಇಂಗ್ಲೀಷಿನಲ್ಲಿ ಇದಕ್ಕೆ RESEARCH ಎಂಬ ಪರ್ಯಾಯ ಪದ ಬಳಕೆಯಲ್ಲಿದೆ. ಮತ್ತೆ ಹುಡುಕು ಎಂದಷ್ಟೇ ಇದರ ಅರ್ಥ. ಈಗ ಇದಕ್ಕೆ ಕ್ರಮಬದ್ಧವಾಗಿ ಮತ್ತೆ ಹುಡುಕು, ಶೋಧಿಸು, ಶುದ್ಧಗೊಳಿಸು ಎಂಬ ಅರ್ಥವಿಸ್ತಾರವಿದೆ. ಸಂಶೋಧನೆಯೆಂದರೆ ಸತ್ಯದ ಬಗೆಗೆ ಹೊಸದಾಗಿ ಹುಡುಕುವಿಕೆ ಎನ್ನಬಹುದು. ಸಂಶೋಧನೆಗೆ ತಮಿಳಿನಲ್ಲಿ 'ಆರಾಯ್ಚಿ' ಎನ್ನುತ್ತಾರೆ. ಇದನ್ನು

ಹಳೆಗನ್ನಡದ 'ಆರಯ್ಬು' ಎಂಬ ಪದದೊಂದಿಗೆ ಹೋಲಿಸಬಹುದು. ಮಲಿಯಾಳಂನಲ್ಲಿ 'ಗವೇಷಣ' ಎಂಬ ಪದವಿದೆ. ಒಟ್ಟಿನಲ್ಲಿ ಇವೆಲ್ಲವುದರ ಅರ್ಥವೂ 'ಹುಡುಕುವಿಕೆ' ಎಂದೇ ಆಗಿದೆ.

"There is no alternative to truth and therefore to research. The Research is to get nearer to the truth, to understand reality...." ವಿಲ್ಕಿನ್ಸನ್ ಮತ್ತು ಭಂಡಾರ್ಕರ್ ಅವರು ತಮ್ಮ Methodology and Techniques of Social Research ಎಂಬ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. ಇದು ಸಂಶೋಧನೆಯ ಬಗೆಗೆ ಕೊಡಲಾದ ಸಮರ್ಪಕವಾದ ಹೇಳಿಕೆಯೆನ್ನಬಹುದು. ಸತ್ಯಕ್ಕೆ ಅಥವಾ ವಸ್ತು ಸ್ಥಿತಿಗೆ ಪರ್ಯಾಯವಾದುದು ಬೇರೆ ಯಾವುದೂ ಇಲ್ಲ. ಸಂಶೋಧನೆಯೆಂದರೆ ವಸ್ತು ಸ್ಥಿತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಅನುಸರಿಸುವ ಪ್ರಾಮಾಣಿಕ ಪ್ರಯತ್ನ ಎಂದರೂ ಸರಿಯೇ. ನಿಜಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಪ್ರಾಮಾಣಿಕತೆ, ಸತ್ಯನಿಷ್ಠೆ, ಕ್ರಮಬದ್ಧತೆಯಿರಬೇಕು. ಒದಗಿಸುವ ಆಧಾರಗಳು ಸರಿಯಾದುದಾಗಿರಬೇಕು. ತರ್ಕಬದ್ಧ ವಿಚಾರಸರಣಿಯಿಂದ ಮಂಡಿಸಿರಬೇಕು. ಹಾಗಿದ್ದಲ್ಲಿ ಅದು ನಿಜವಾದ ಸಂಶೋಧನೆಯೆನ್ನಿಸುತ್ತದೆ. ಉತ್ಕೃಷ್ಟವಾದುದೆನ್ನಿಸುತ್ತದೆ.

**1.3 ವೈಜ್ಞಾನಿಕ ರೀತಿಯ ಸಂಶೋಧನೆ :**

ವಿಲ್ಕಿನ್ಸನ್ ಮತ್ತು ಭಂಡಾರ್ಕರ್ ಅವರು ಸಂಶೋಧನೆಯ ಬಗೆಗೆ ಹೇಳುತ್ತಾ "Research, Simply put, is an endeavour to discover intellectual and practical answers to problems through the application of Scientific Methods to the knowable universe" ಎಂದಿದ್ದಾರೆ. [Methodology & Techniques of Social Research· ch I P:1]

ವೈಜ್ಞಾನಿಕವಾಗಿಯೂ ನಿಖರವಾಗಿಯೂ ಹೇಳುವಂತಹ ವಿಧಾನಗಳಿಂದ ಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ವಿಧಾನವೇ ಸಂಶೋಧನೆಯೆಂದು ಸರಳವಾಗಿ ಹೇಳಬಹುದು. ಇದಕ್ಕೆ ಇಂತಿಷ್ಟೇ ಎಂಬ ಪರಿಮಿತಿಯಿರುವುದಿಲ್ಲ. ಸಂಶೋಧಕನ ಅವಿರತ ಶ್ರಮ, ಸತತ ಅಭ್ಯಾಸ ಚಿಂತನ – ಮಂಥನ–ಇವುಗಳ ಸಮಾವೇಶಗಳಿಂದ ಸಂಶೋಧನಾ ಫಲವು ಮೂಡಿರುತ್ತದೆ. ಸತ್ಯಸ್ಥಿತಿಯೇ ಇದರ ಪರಿಣಾಮ. ಇಲ್ಲಿ ಸಂದಿಗ್ಧತೆಗೆ ಅವಕಾಶವಿಲ್ಲ. ಸರಳವೂ ನೇರವೂ ಆಗಿದ್ದು ಸ್ಪಷ್ಟವಾಗಿರ

ಬೇಕು. ಯಾವುದೇ ರೀತಿಯ ಅನುಮಾನ-ಸಂದೇಹಗಳಿಗೆ ಅವಕಾಶವಿರುವುದಿಲ್ಲ.

**1.4 ಸಂಶೋಧಕನ ಅರ್ಹತೆಗಳು :**

ಈಗಾಗಲೇ ಹೇಳಿರುವಂತೆ ಸಂಶೋಧಕನಿಗೆ ಪ್ರಾಥಮಿಕವಾದ ಅರ್ಹತೆ ಇರಬೇಕು. ಬಹುಮಟ್ಟಿಗೆ ಪ್ರತಿಭಾವಂತರೆನ್ನಿಸಿಕೊಂಡವರು ಮಾತ್ರವೇ ವಿದ್ಯಾಭ್ಯಾಸದ ಉನ್ನತ ಮಟ್ಟಗಳನ್ನು ಏರುವ ಕಾರಣದಿಂದ ಸಾಮಾನ್ಯವಾಗಿ ಸಂಶೋಧನೆ ನಡೆಸಲು ಇಷ್ಟಪಡುವವರು ಪ್ರತಿಭಾವಂತರೇ ಆಗಿರುತ್ತಾರೆ. ಹಾಗೆಂದು ಸಂಶೋಧನೆ ಕೆಲವೇ ಕೆಲವು ವ್ಯಕ್ತಿಗಳ ಹಕ್ಕು ಎಂದು ತಿಳಿಯಬಾರದು. ಸಂಶೋಧನೆಯನ್ನು ಯಾರು ಬೇಕಾದರೂ ಮಾಡಬಹುದು. ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಓದದೆ ಇರುವ ಅದೆಷ್ಟೋ ಮಂದಿ ಪ್ರತಿಭಾವಂತ ಸಂಶೋಧಕರು ನಮ್ಮ ನಡುವೆ ಇದ್ದಾರೆ. ಸಂಶೋಧಕನೆಂಬ ಚೀಟಿಯನ್ನು ಹೊಂದಿ ಏನನ್ನೂ ಮಾಡದವರೂ ಇದ್ದಾರೆ. ಸಂಶೋಧಕನಿಗಿರಬೇಕಾದುದು ಅದಮ್ಯವಾದ ಉತ್ಸಾಹ, ಶ್ರಮ, ಅಭ್ಯಾಸ, ಚಿಂತನ-ಶೀಲತೆ ಮೊದಲಾದವುಗಳು. ಇವುಗಳನ್ನು ರೂಢಿಸಿಕೊಂಡು ಮುನ್ನಡೆವ ಯಾರೇ ಆದರೂ ಸಂಶೋಧನೆಯನ್ನು ಕೈಗೊಳ್ಳಬಹುದಾಗಿದೆ. ಇಂದು ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಸಂಶೋಧನೆ ನಡೆಸಲು ಆಯಾ ಕ್ಷೇತ್ರದಲ್ಲಿ ಸ್ನಾತಕ ಪದವಿಯೊಂದೇ ಸಾಕು. ಏನಿದ್ದರೂ ತಾನು ಸಂಶೋಧನೆ ನಡೆಸಬೇಕೆಂದಿರುವ ಕ್ಷೇತ್ರದಲ್ಲಿ ಪರಿಪೂರ್ಣವಾದ ಕಲ್ಪನೆಯಿರಬೇಕಾದುದು ಮುಖ್ಯ.

ಆಯ್ದುಕೊಂಡ ಕ್ಷೇತ್ರದಲ್ಲಿ ಕೆಲಸ ಪ್ರಾರಂಭಿಸಿ ಅದರ ತುದಿಯನ್ನು ತಲುಪುವೆನೆಂಬ ಆತ್ಮಸ್ಥೈರ್ಯವೂ ಮುಖ್ಯವೇ. ಕಡಿಮೆ ಸಮಯದಲ್ಲಿ ಹೆಚ್ಚು ವಿಷಯಗಳನ್ನು ಸಂಗ್ರಹಿಸುವ ಶಕ್ತಿಯನ್ನು ರೂಢಿಸಿಕೊಳ್ಳುವುದು ಸಂಶೋಧಕನಿಗಿರಬೇಕಾದ ಇನ್ನೊಂದು ಗುಣವಿಶೇಷ. ಕೆಲವೊಮ್ಮೆ ಸಂಶೋಧನೆಗೆ ಒದಗಬಹುದಾದ ಸಮಯಾವಕಾಶ ಅತಿ ಕಡಿಮೆ ಇರುತ್ತದೆ. ಉದಾಹರಣೆಗೆ ಎಂ.ಫಿಲ್. ಪದವಿಯ ತರಗತಿಯು ಕೇವಲ ಎಂಟೋ ಹತ್ತೋ ತಿಂಗಳಿಗೆ ಮುಗಿದು ಬಿಡುತ್ತದೆ. ಇದಕ್ಕೆ ಚಿಕ್ಕದಾದ ನಿಬಂಧವೊಂದನ್ನು ಅರ್ಪಿಸಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಕಡಿಮೆ ಸಮಯದಲ್ಲಿ ಹೆಚ್ಚು ಹೆಚ್ಚು ವಿಷಯಗಳನ್ನು ಸಂಗ್ರಹಿಸುವ ಚಾಕಚಕ್ಯತೆಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಪಿಎಚ್.ಡಿ. ಮೊದಲಾದ ಸಂಶೋಧನೆಗಳಿಗೆ ಸಮಯಾವಕಾಶ ಹೆಚ್ಚು ಸಿಗುವುದಾದರೂ ಕೆಲವೊಂದು ಸಂದರ್ಭಗಳಲ್ಲಿ ವಿಷಯ ಸಂಗ್ರಹಣೆಗೆ ಸಮಯಾವಕಾಶ ಕಡಿಮೆಯಾಗುವುದೂ ಇದೆ. ಅತಿ ಕಡಿಮೆ ಸಮಯದಲ್ಲಿ ಅತಿ ಹೆಚ್ಚು ವಿಚಾರ ಸಂಗ್ರಹ ಮಾಡಲು ತರಬೇತಿ ಪಡೆದರೆ ಸಂಶೋಧಕನ ಅರ್ಧ ಕೆಲಸ ಮುಗಿದಂತೆಯೇ ಆಗುತ್ತದೆ.

ಹಾಗೆಯೇ ವಿಷಯ ಸಂಗ್ರಹಣೆಗಳಲ್ಲಿ ಬೇಕಾದುದನ್ನಷ್ಟೇ ದಾಖಲಿಸಿಕೊಂಡು ಬಿಡುವುದು, ಯಾವುದು ತನಗೆ ಬೇಕಾದ ವಿಚಾರ–ಮಾಹಿತಿ ಎಂದು ಮೊದಲೇ ನಿಶ್ಚಯ ಮಾಡಿ ಗುರುತು ಮಾಡಿಟ್ಟುಕೊಂಡರೆ ಕೆಲಸ ಮುಗಿಸಲು ಕಡಿಮೆ ಸಮಯ ಸಾಕಾದೀತು. ಇದಕ್ಕೆ ಪೂರ್ವ ನಿಯೋಜಿಸುವಂತಹ ಮಾನಸಿಕ ತಯಾರಿಯು ಅಗತ್ಯವೂ ಇದೆ. ಒಮ್ಮೆ ಮಾಡಿದ ಕೆಲಸವನ್ನು ಇನ್ನೊಮ್ಮೆ ಮಾಡುವಂತಿರಬಾರದು. ಇದು ಸಂಶೋಧಕನಿಗಿರಬೇಕಾದ ಅವಶ್ಯವಾದ ಗುಣ. ಇದರಿಂದ ಸಮಯದ ಮಿತವ್ಯಯ ವಾಗುತ್ತದೆ.

ಸಾಹಿತ್ಯ ಸಂಶೋಧನೆಗಂತೂ ಓದುವ ಚಟ ಸಂಶೋಧಕನಿಗಿರಲೇಬೇಕಾದ ಒಂದು ಮುಖ್ಯ ಗುಣ. ಓದು ವ್ಯವಸ್ಥಿತವಾಗಿರಬೇಕು. ಪುಸ್ತಕಗಳ, ವಿಷಯಗಳ ವರ್ಗೀಕರಣ ಪಟ್ಟಿಯೊಂದನ್ನು ಮೊದಲಿಗೆ ತಯಾರಿಸಿಟ್ಟುಕೊಳ್ಳಬೇಕು. ಎಲ್ಲಾ ಪುಸ್ತಕಗಳೂ ಅನುಭವವನ್ನು ಕೊಡುವವುಗಳೇ ಆದರೂ, ಅನುಭವಕ್ಕಾಗಿ ಓದುವ ರೀತಿ ಬೇರೆ, ಸಂಶೋಧನೆಯ ದೃಷ್ಟಿಯಿಂದ ಟಿಪ್ಪಣಿ ಮಾಡಿಕೊಳ್ಳುತ್ತ ಅಧ್ಯಯನ ನಡೆಸುವ ರೀತಿಯೇ ಬೇರೆ. ಸಂಶೋಧನೆಗೆ ಪೂರಕವಾದ ದೃಷ್ಟಿಯಿಂದ ಕೃತಿಗಳ ಅಭ್ಯಾಸ ನಡೆಸುವಾಗ ಬಹಳಷ್ಟು ಎಚ್ಚರಿಕೆ ಇರಬೇಕಾಗುತ್ತದೆ. ತನಗೆ ಬೇಕಾದ ಸಾಮಗ್ರಿಗಳನ್ನು ಅವಶ್ಯವಾಗಿ ಟಿಪ್ಪಣಿ ಮಾಡುವುದರೊಂದಿಗೆ ಆ ಟಿಪ್ಪಣಿಗಳ ಬಗೆಗೂ ಸ್ಪಷ್ಟವಾದ ಮಾಹಿತಿಗಳನ್ನು ಬರೆದಿಟ್ಟುಕೊಳ್ಳಬೇಕು. ಯಾವ ಕೃತಿಯಲ್ಲಿ ಹೇಳಲಾದ ವಿಚಾರ, ಲೇಖಕರ ಹೆಸರು, ಪ್ರಕಾಶಕರು, ಪ್ರಕಟಣೆಯ ವರ್ಷ ಇವೆಲ್ಲವೂ ಮುಖ್ಯವಾದ ವಿಚಾರಗಳಾಗುತ್ತವೆ. ಇವುಗಳ ಬಗೆಗೂ ಸಂಶೋಧಕನಿಗೆ ಎಚ್ಚರವಿರಬೇಕು. ಆ ರೀತಿ ಬರೆದಿಟ್ಟುಕೊಳ್ಳುವುದರಿಂದ ಮುಂದೆ ಆ ವಿಷಯದ ಬಗೆಗೆ ಸಂದೇಹ ತಲೆದೋರಿದಲ್ಲಿ ಮತ್ತೊಮ್ಮೆ ಸುಲಭವಾಗಿ ಪುಸ್ತಕವನ್ನು ನೋಡಬಹುದು. ಕೆಲವೊಮ್ಮೆ ಅಪರೂಪದ ಪುಸ್ತಕಗಳನ್ನು ಅವಲೋಕಿಸಿದಾಗ ಆ ಗ್ರಂಥಗಳು ಇರುವ ಗ್ರಂಥಾಲಯ ಅಥವಾ ವ್ಯಕ್ತಿಗಳ ವಿಳಾಸವನ್ನು ಬರೆದಿಟ್ಟುಕೊಳ್ಳುವುದು ಒಳ್ಳೆಯದು. ಒಂದು ವೇಳೆ ಆ ಪುಸ್ತಕದ ಪುಟಗಳನ್ನು ಮತ್ತೆ ಮತ್ತೆ ತಿರುವಿಹಾಕುವುದಕ್ಕೂ ಇಲ್ಲದ ಪರಿಸ್ಥಿತಿಯಲ್ಲಿ ಆ ಪುಸ್ತಕವಿದ್ದರೆ, ಅದರ ನಕಲನ್ನು ಜಾಗರೂಕತೆಯಿಂದ ಜೆರಾಕ್ಸ್ ತೆಗೆಸಿಟ್ಟುಕೊಂಡರೆ ಮತ್ತೂ ಒಳ್ಳೆಯದು. ಇಂತಹ ಪ್ರಸಂಗಗಳಲ್ಲಿ ಸಂಶೋಧಕ ಸಮಯಾನುಕೂಲತೆ ಹಾಗೂ ಸಮಯ ಸ್ಫೂರ್ತಿಯಿಂದ ವರ್ತಿಸಬೇಕಾಗುತ್ತದೆ. ಒಂದು ಹೇಳಿಕೆಯನ್ನು ಖಂಡಿಸುವುದಿದ್ದರೂ, ಮಂಡಿಸುವುದಿದ್ದರೂ ಈ ರೀತಿಯಲ್ಲಿ ಬರೆದಿಟ್ಟುಕೊಂಡ ಮಾಹಿತಿಗಳ ಆಧಾರದೊಂದಿಗೆ ನಿರೂಪಿಸಬೇಕಾಗುತ್ತದೆ.

## 1.5 ಸಂಶೋಧಕ ಮತ್ತು ಸಂಶೋಧನಾ ಕ್ಷೇತ್ರ :

ಸಂಶೋಧಕ ಯಾವಾಗಲೂ ತನ್ನ ಸಂಶೋಧನಾ ಕ್ಷೇತ್ರದ ಬಗೆಗೆ ಎಚ್ಚರದಿಂದಿರಬೇಕು. ಅದೇ ರೀತಿ ಆಸಕ್ತಿಯನ್ನೂ ಉಳಿಸಿ ಬೆಳೆಸುತ್ತಿರಬೇಕು. ವಿದ್ವಾಂಸರ ಇತರ ಸಾಹಿತ್ಯಾಸಕ್ತ ಸ್ನೇಹಿತರುಗಳನ್ನೂ ಭೇಟಿ ಮಾಡಿದಾಗಲೆಲ್ಲ ಸಂಶೋಧನೆಗೆ ಸಂಬಂಧಪಟ್ಟಂತೆ ವಿಷಯಗಳನ್ನು ಚರ್ಚಿಸುತ್ತಿರಬೇಕು. ಆಗ ತನಗೆ ಗೊತ್ತಿಲ್ಲದ ವಿಚಾರಗಳನ್ನು ತಿಳಿಯಬಹುದು. ವಿಷಯ ಸಂಗ್ರಹಣೆಗೆ ಅವರ ವಿಚಾರಧಾರೆಗಳು ಪ್ರೇರಣೆ ನೀಡಬಹುದು, ಪೋಷಕವಾಗಿರಬಹುದು ಇಲ್ಲವೇ ನಮ್ಮ ಸಂಗ್ರಹಣೆಗೆ ದಾರಿ ತೋರುವ ವ್ಯವಸ್ಥಿತ ರೀತಿಯಲ್ಲಿನ ಮುಂದುವರೆದ ರೂಪವಾಗಿರಬಹುದು. ಪ್ರೌಢವಾದ ಲೇಖನಗಳನ್ನು ಓದುತ್ತಾ ಹೋದಾಗ ಕ್ರಮವಾಗಿ ತಮ್ಮ ಭಾಷೆಯನ್ನೂ ಬೆಳಸಿಕೊಳ್ಳುತ್ತಾ ಹೋಗಬಹುದು. ತಾನು ಶೇಖರಿಸಿ ಆರಿಸಿಕೊಂಡ ಟಿಪ್ಪಣಿಗಳ ತಳಹದಿಯ ಮೇಲೆ ಪ್ರೌಢವಾದ ಲೇಖನಗಳನ್ನು ಬರೆಯಬಹುದು. ಈ ರೀತಿಯ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದಾಗ ಅವುಗಳಿಗೆ ವಿದ್ವಾಂಸರಿಂದ ಪ್ರತಿಕ್ರಿಯೆಗಳೇನಾದರೂ ಕಂಡುಬಂದಲ್ಲಿ, ಪ್ರಯೋಜನ ಪಡೆದುಕೊಳ್ಳಬಹುದು. ಹೀಗೆ ಮಾಡುವುದರಿಂದ ಸಂಶೋಧನಾ ಲೋಕದಲ್ಲಿ ನಮ್ಮನ್ನು ನಾವು ಪರಿಚಯಿಸಿಕೊಂಡಂತೆ ಆಗುತ್ತದೆ. ಎಷ್ಟೋ ಕ್ಷೇತ್ರಗಳಲ್ಲಿ ಪರಸ್ಪರ ಅರಿವಿಲ್ಲದೆಯೇ ಸಂಶೋಧನೆ ನಡೆಸಿ ಪುನರಾವೃತ್ತಿಯಾಗುವ ಸಾಧ್ಯತೆಯೂ ಇರುತ್ತದೆ. ಇಂತಹುದೇನಾದರೂ ಸಂಭವಿಸದಂತೆ ನೋಡಿಕೊಳ್ಳಬಹುದು.

ಸಂಶೋಧಕನು ತನ್ನ ಸಂಶೋಧನಾ ಕ್ಷೇತ್ರವನ್ನು ಆರಿಸಿಕೊಳ್ಳುವಾಗ ತಾನು ಆರಿಸಿಕೊಂಡ ಕ್ಷೇತ್ರದ ಬಗೆಗೆ ಪೂರ್ವಮಾಹಿತಿಯನ್ನು ಪಡೆದಿರಬೇಕಾಗುತ್ತದೆ. ಈವರೆಗೆ ಈ ಕ್ಷೇತ್ರದಲ್ಲಿ ಎಷ್ಟು ಕೆಲಸ ನಡೆದಿದೆ, ಇನ್ನೆಷ್ಟು ಮಾಡಬೇಕಾದ್ದಿದೆ, ಯಾರು ಯಾರು ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿದ್ದಾರೆ ಇತ್ಯಾದಿ ಇತ್ಯಾದಿಗಳ ಬಗೆಗೆ ಸ್ಪಷ್ಟ ಕಲ್ಪನೆ ಇರಬೇಕು. ಇಲ್ಲದೇ ಹೋದರೆ ತಾನು ಆರಿಸಿಕೊಂಡ ಕ್ಷೇತ್ರದ ಬಗೆಗೆ ಸಂಶೋಧನೆ ನಡೆಸುವುದು ಕಷ್ಟವಾದೀತು. ಈ ರೀತಿಯಲ್ಲಿ ಪೂರ್ವಮಾಹಿತಿ ಸಂಗ್ರಹಕಾಲದಲ್ಲಿಯೇ ಅದರ ಬಗೆಗೆ ಇನ್ನೇನು ಕೆಲಸ ನಡೆಸಬಹುದು ಎಂಬ ಕಲ್ಪನೆಯನ್ನು ಮಾಡಿಕೊಳ್ಳಬಹುದು. ಸಾಮಾನ್ಯವಾಗಿ ಇಂತಹ ಪರಿಕಲ್ಪನೆ ಮಾಡಿಕೊಳ್ಳದಿದ್ದರೆ ವಿಷಯದ ಪುನರಾವರ್ತನೆಯಾಗುವ ಅಪಾಯವಿರುತ್ತದೆ.

ಸಂಶೋಧಕ ತನ್ನ ಯಾವುದೇ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಛಲವುಳ್ಳವನಾಗಿರಬೇಕು. ಮಾಹಿತಿಗಳನ್ನು ಸಂಗ್ರಹಿಸುವಾಗ ಇದನ್ನು ಕಟ್ಟುನಿಟ್ಟಾಗಿ ಆಚರಿಸಬೇಕು. ಹಳೆಯ ಹಸ್ತಪ್ರತಿಗಳು, ಹಳೆಯ ಅಪೂರ್ವ ಪುಸ್ತಕಗಳು ಮೊದಲಾದವುಗಳನ್ನು ದೊರಕಿಸಿಕೊಳ್ಳುವಲ್ಲಿ ಇದು ಮುಖ್ಯವಾದ ವಿಚಾರವಾಗುತ್ತದೆ.

ಕೆಲವೊಮ್ಮೆ ಸಾಮಗ್ರಿ ಸಂಗ್ರಹಕ್ಕಾಗಿ ಅತಿದೂರ ಹೋಗಬೇಕಾದ ಪರಿಸ್ಥಿತಿಯ ಬರಬಹುದು. ಇಂತಹ ಸಂದರ್ಭಗಳಲ್ಲಿ ಅದಕ್ಕೂ ಸಿದ್ಧನಿರಬೇಕು.

## 1.6 ಸಾಹಿತ್ಯ ಸಂಶೋಧನೆ ಮತ್ತು ವೈಜ್ಞಾನಿಕ ಸಂಶೋಧನೆಯ ಉಪಯೋಗ :

ವಿಜ್ಞಾನ ಕ್ಷೇತ್ರಗಳಲ್ಲಿ ಸಮಸ್ಯೆಗಳನ್ನಾಗಲೀ ವಿಷಯಗಳನ್ನಾಗಲೀ ಪ್ರಾಯೋಗಿ ವಾಗಿ ಬಿಡಿಸುತ್ತ ಹೋಗಬಹುದು. ಇದಕ್ಕಾಗಿ ಪ್ರಯೋಗಶಾಲೆಗಳನ್ನು ಬಳ ಕೊಳ್ಳಬಹುದು. ನಿಖರವಾಗಿ ಇಂಥಾದ್ದೇ ಎಂದು ಪ್ರಮಾಣೀಕರಿಸಬಹುದು ಸಂಶೋಧನಾ ಫಲವನ್ನು ನಿರ್ದಿಷ್ಟವಾಗಿ ರುಜುವಾತುಪಡಿಸಿಕೊಳ್ಳಬಹುದು. ಸಾಹಿ ಕ್ಷೇತ್ರದಲ್ಲಿ ಇದು ಅಸಾಧ್ಯ. ಇದಕ್ಕಾಗಿ ಪುಸ್ತಕಗಳು, ಶಾಸನಗಳು, ಹಸ್ತಪ್ರತಿಗಳು ಕ್ಷೇತ್ರಕಾರ್ಯಗಳಿಂದ ಬರಬಹುದಾದ ದಾಖಲೆಗಳು - ಮೊದಲಾದವುಗಳನ್ನೇ ಆಧರಿ ಬೇಕಾಗುತ್ತದೆ. ಈ ಎಲ್ಲ ದಾಖಲೆಗಳ ಆಧಾರದ ಮೇಲೆ ವಿಶ್ಲೇಷಣೆಗಳನ್ನು ನಡೆಸಬೇಕಾಗುತ್ತದೆ. ಏನಿದ್ದರೂ ಬೌದ್ಧಿಕ ಕೆಲಸಕ್ಕೆ ಇಲ್ಲಿ ಪ್ರಾಧಾನ್ಯ. ಸಮ್ಮ ಅನುಭವದ ಮಟ್ಟ, ಪ್ರತಿಭೆಯ ಕೆಲಸ, ಶ್ರಮ, ದೊರೆತ ಆಧಾರಗಳು–ಇವೆಲ್ಲವೂ ಅತಿ ಮುಖ್ಯ. ಬೌದ್ಧಿಕ ಮಟ್ಟದಲ್ಲಿ ಆಳವಾದ ಚಿಂತನೆಯಾಗುವಾಗ ಆತನೊಬ್ಬ ನ್ಯಾಯ ವಾದಿಯಾಗಿರಬೇಕಾಗುತ್ತದೆ. ನಿಷ್ಪಕ್ಷಪಾತಿಯಾದ ನ್ಯಾಯಾಧೀಶನೂ ಆಗಿರಬೇಕು. ಸಂಶೋಧನೆಯ ಅಂತಿಮ ಘಟ್ಟವನ್ನು ತಲುಪುವಾಗ ಯಾವುದೇ ರೀತಿಯ ಪ್ರಾಯೋಗಿಕ ಪ್ರಾತ್ಯಕ್ಷಿಕತೆಯೆಂಬುದು ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯಲ್ಲಿ ಅಸಾಧ್ಯವಾದುದರಿಂದ ಬೌದ್ಧಿಕ ಮಟ್ಟದಲ್ಲಿ ಹೆಚ್ಚಿನ ಕೆಲಸದ ಅಗತ್ಯವಿರುತ್ತದೆ. ವಿಜ್ಞಾನಿಗಳಿಗೆ ಪ್ರಯೋಗಶಾಲೆ ಸಂಶೋಧನೆಯ ಕೇಂದ್ರವಿದ್ದಂತೆ. ಸಾಹಿತ್ಯ ಸಂಶೋಧಕನಿಗೆ ಪುಸ್ತಕಗಳೇ ಪ್ರಪಂಚ. ವಿದ್ವಾಂಸರೇ ಜೀವನಾಡಿ.

ಸಂಶೋಧನೆ ನಡೆಸುತ್ತಿರುವಂತೆ ಯಾವುದೇ ಒಂದು ವಿಚಾರ, ಅದು ಘಟನೆ ಇರಬಹುದು, ಸಮಸ್ಯೆಯಿರಬಹುದು, ನಿರೂಪಣೆಯಲ್ಲಿರಬಹುದು, ಹೋಲಿಕೆಯಾಗಿರಬಹುದು-ಅದರ ಪರಿಶೀಲನೆ ಮಾಡುವಲ್ಲಿ ಎಚ್ಚರವಿರಬೇಕು. ಸಮಸ್ಯೆಯನ್ನು ಆಯ್ದುಕೊಳ್ಳುವುದರಲ್ಲೂ ಅಷ್ಟೆ. ಸಮಸ್ಯೆಯೇನು ಎಂಬುದರ ಸ್ಪಷ್ಟವಾದ ಅರಿವು ಸಂಶೋಧನೆಯಲ್ಲಿ ಮುಖ್ಯ. ಸಮಸ್ಯೆಯೇನೆಂದೇ ತಿಳಿಯದವನು ಸಂಶೋಧನೆಯನ್ನು ನಡೆಸುವುದು ಹೇಗೆ ? ಇದಕ್ಕಾಗಿಯೇ ಸಂಶೋಧನೆಯಲ್ಲಿ ವಸ್ತುವಿನ ಆಯ್ಕೆ ಎಂಬುದು ಅತ್ಯಂತ ಮಹತ್ವದ ವಿಚಾರ. ಸಮಸ್ಯೆಯನ್ನು ಆಯ್ದುಕೊಂಡು ಅದಕ್ಕೆ ಪೂರಕವಾದ ಸಾಕ್ಷ್ಯಾಧಾರಗಳ ಪೂರ್ವಕವಾದ ಸತ್ಯ ಘಟನೆಗಳಿಂದ ಪ್ರಚೋದನೆಗೊಂಡ ಮಾನಸಿಕ ಅನುಭವದ ಪ್ರಕಟಣೆಯು ಸಂಶೋಧನೆಯಾಗುತ್ತದೆ.

ಸಂಶೋಧನೆ ಸೃಷ್ಟಿಯೂ ಅಲ್ಲ ವಿಮರ್ಶೆಯೂ ಅಲ್ಲ. ಸಂಶೋಧಕನಾದವನು ಈಗಾಗಲೇ ಪ್ರಚಾರದಲ್ಲಿರುವ ಅಥವಾ ಅಪೂರ್ವ ವಸ್ತುವೊಂದನ್ನು ಆರಿಸಿ ಸಮಸ್ಯೆಯನ್ನು ರೂಪಿಸಿಕೊಂಡು ಅದನ್ನು ಕ್ರಮಬದ್ಧವಾಗಿ ಬಿಡಿಸಿ, ಸರಳೀಕರಣಗೊಳಿಸಿ ನಿರೂಪಿಸುವ ಆತನ ಚಿಕಿತ್ಸಕ ದೃಷ್ಟಿ ಎನ್ನಬಹುದು.

## 1.7 ಪಕ್ಷಪಾತ ರಹಿತ ದೃಷ್ಟಿ

ಸಂಶೋಧಕನಾದವನಿಗೂ ಹಲವು ಯೋಗ್ಯತೆಗಳಿರಬೇಕು. ಹಾಗಿರುವಂತೆ ತನ್ನನ್ನು ತಾನು ತಯಾರಿಗೊಳಿಸಿಕೊಳ್ಳಬೇಕು. ಇದರಲ್ಲಿ ಪಕ್ಷಪಾತರಹಿತವಾದ ದೃಷ್ಟಿಕೋನವೂ ಒಂದು. ಆತ ಯಾವುದೇ ಪೂರ್ವನಿಯೋಜಿತ ದೃಷ್ಟಿಗಳುಳ್ಳವನಾಗಿರಕೂಡದು. ಅಥವಾ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಯಾವುದೇ ರೀತಿಯ ಪಕ್ಷಪಾತ ಸಲ್ಲದು. ಆತನೊಬ್ಬ ನಿಷ್ಪಕ್ಷಪಾತಿಯಾದ ನ್ಯಾಯಾಧೀಶನಾಗಿರುತ್ತಾನೆ. ಸತ್ಯದ ಬಗೆಗೆ ಪ್ರಾಮಾಣಿಕನಾದ ವ್ಯಕ್ತಿಯಾಗಿರುತ್ತಾನೆ. ಸತ್ಯದ ಪ್ರತಿಪಾದನೆಯೇ ಆತನ ಗುರಿ. ಸ್ವಾರ್ಥದಾಗಲೀ, ವೈಯುಕ್ತಿಕ ದೃಷ್ಟಿಕೋನಗಳನ್ನಿರಿಸಿಕೊಂಡದ್ದಾಗಲಿ ಆಗಿರಬಾರದು. ಏಕೆಂದರೆ ಆತನು ಕಂಡುಕೊಳ್ಳುವ ಅಂಶಗಳು ನೀಡುವ ಹೇಳಿಕೆಗಳು ಕೇವಲ ಆತನಿಗಾಗಿ ಮಾತ್ರವಲ್ಲ, ಮುಂದಿನ ಸಾಹಿತ್ಯ ಸಂಶೋಧನಾಸಕ್ತರಿಗೆ ದಾರಿದೀಪವಾಗಿರುತ್ತವೆ. ಆದುದರಿಂದ ಆತನು ನೀಡುವ ಹೇಳಿಕೆಗಳು ಮುಂದಿನವರಿಗೆ ಆಧಾರಗಳಾಗುತ್ತವೆ. ಹೀಗಾಗಿ ಮುಂದಿನ ಸಂಶೋಧಕರನ್ನು ತಪ್ಪು ದಾರಿಗೆ ಎಳೆಯದಂಥಾ ಜವಾಬುದಾರಿಯೂ ಸಂಶೋಧಕನಿಗಿರುತ್ತದೆ. ಹಾಗಾಗಿ ಇಲ್ಲಿ ಅಹಂಭಾವವೆಂದೂ ಸಲ್ಲದು. ಕೇವಲ ಕೀರ್ತಿಗಾಗಿ ಸಂಶೋಧನೆಯಾಗಬಾರದು. ಇಲ್ಲಿ ವ್ಯಕ್ತಿತ್ವ ಗೌಣ, ವಸ್ತುಸ್ಥಿತಿಯೇ ಪ್ರಧಾನವಾಗಿರುತ್ತದೆ. ನಿಸ್ಪೃಹವಾದ ಚಿತ್ತವೃತ್ತಿಯನ್ನಿರಿಸಿಕೊಂಡು ಮಾಡುವ ಸಂಶೋಧನೆಯೇ ಎಂದಿಗೂ ಬೆಲೆಯುಳ್ಳದ್ದೂ, ಕೀರ್ತಿಯುಳ್ಳದ್ದೂ ಆಗಿರುತ್ತದೆ.

ಸಂಶೋಧನಾ ಮಾರ್ಗದಲ್ಲಿ ನೀಡುವ ತೀರ್ಮಾನಗಳು ಸಂಶೋಧನೆಯ ಸತ್ಯದ ಸಿದ್ಧಾಂತಗಳ ಫಲಗಳೇ ಆಗಬೇಕೇ ಹೊರತಾಗಿ ಯಾವುದೇ ರೀತಿಯ ನಿಯಂತ್ರಣಗಳಿಗೆ ಅಥವಾ ದಾಕ್ಷಿಣ್ಯದ ಒತ್ತಡಕ್ಕೆ ಮಣಿಯುವಂತಿರಬಾರದು. ಹಾಗೆ ಆದಾಗ ಮಾತ್ರವೇ ಸಂಶೋಧನೆಯ ಫಲಕ್ಕೆ ಬೆಲೆ ಬರುವುದು. ಯಾವುದೇ ಶಕ್ತಿಯ ಅಥವಾ ಯಾವನೇ ವ್ಯಕ್ತಿಯ ಆಕರ್ಷಣೆ ಹಾಗೂ ದಾಕ್ಷಿಣ್ಯಗಳು ಸಂಶೋಧನೆಗೆ ಮಾರಕವಾಗಬಹುದು. ಅದರಿಂದ ಉದ್ದೇಶಿತ ಗುರಿಯನ್ನು ತಲುಪಿದಂತಾಗಬಾರದು. ದೊಡ್ಡ ವ್ಯಕ್ತಿಯೆನಿಸಿಕೊಂಡವನ ಹೇಳಿಕೆಗಳನ್ನು ಹಾಗೆಯೇ ಸ್ವೀಕರಿಸಬೇಕೆಂಬ ನಿಯಮವೇನೂ ಇಲ್ಲ. ಪಂಡಿತನಾದವನು ಹೇಳಿದ್ದೆಲ್ಲಾ ಸರಿ, ಸಾಮಾನ್ಯ ವ್ಯಕ್ತಿಯೊಬ್ಬನ ಆಧಾರ

ಗಳಲ್ಲಿ ಹುರುಳಿಲ್ಲ ಎಂಬ ಪೂರ್ವನಿಯೋಜಿತ ಬಂಧಗಳನ್ನೂ ಸಂಶೋಧಕ ತೋರೆಯು ಬೇಕು. ಸತ್ಯ ಸ್ಥಿತಿಯ ಆಧಾರಗಳನ್ನು ಕೊಟ್ಟವರು ಯಾರೇ ಆಗಿರಲಿ ವ್ಯಕ್ತಿ, ಶಕ್ತಿ, ಅಂತಸ್ತುಗಳ ಭೇದವಿಲ್ಲದೆ ಸ್ವೀಕರಿಸಬೇಕು. ಎಷ್ಟೋ ವೇಳೆ ವಿದ್ವಾಂಸರೆನ್ನಿಸಿಕೊಂಡ ವರು ನೀಡಿದ ಹೇಳಿಕೆಗಳು ಸಾಹಿತ್ಯ ಸಂಶೋಧಕರನ್ನು ದಾರಿ ತಪ್ಪಿಸಿದ್ದೂ ಕಂಡು ಬಂದಿದೆ. ಆದುದರಿಂದ ಸಂಶೋಧಕನು ಯಾವುದೇ ರೀತಿಯಲ್ಲಿ ಆಧಾರ ಮಾಹಿತಿ ಗಳನ್ನು ಸಂಗ್ರಹಿಸುವಾಗ ತುಂಬಾ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ.

ಡಾ॥ ಚಿದಾನಂದ ಮೂರ್ತಿಯವರು ಹೇಳುವಂತೆ ಸಂಶೋಧಕನೊಬ್ಬ ಸಂಶಯಪಿಶಾಚಿಗ್ರಸ್ತನಾಗಿರಬೇಕಾಗುತ್ತದೆ. ಯಾವುದೇ ವಿಚಾರವನ್ನು ಅನುಮಾನ ದೃಷ್ಟಿಯಿಂದ ನೋಡುವುದರಿಂದ ಆ ವಿಷಯದ ಬಗೆಗೆ ಇನ್ನಷ್ಟು ಹೆಚ್ಚು ತಿಳಿಯು ವಂತೆ ಮಾಡುತ್ತದೆ. ಇದುವೇ ಆತನ ಸಂಶಯ ಪಿಶಾಚಿ ಮಾಡುವ ಕೆಲಸ. ಇದರಿಂದಾಗಿ ಆ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ವಿಚಾರಗಳು ಪ್ರಚೋದಿತವಾಗಿ ಹಲವು ವಿಚಾರ ಗಳತ್ತ ಮನಸ್ಸನ್ನು ಕೊಂಡೊಯ್ಯಲು ಪ್ರೇರಕವಾಗುತ್ತದೆ. ಇದರಿಂದ ಅನೇಕ ರೀತಿಯ ದೃಷ್ಟಿಕೋನಗಳನ್ನು ಬೆಳೆಸಿಕೊಳ್ಳಲು, ವಿಚಾರಗಳನ್ನು ಸಂಗ್ರಹಿಸಲು ಅನು ಕೂಲವೂ ಆಗುತ್ತದೆ. ಹಲವು ವಿಚಾರಗಳನ್ನು ಸಂಗ್ರಹಿಸಿದ ಮೇಲೆ ತನ್ನದೇ ಆದ ನಿಕಷವನ್ನೊಡ್ಡಿ ತೀರ್ಮಾನಕ್ಕೆ ಬರಲು ಸುಲಭವೂ ಆಗುತ್ತದೆ.

# 2. ಸಂಶೋಧನೆಯ ವಿಷಯದ ಆಯ್ಕೆ

## 2.1 ಮುನ್ನುಡಿ

ಸಂಶೋಧನೆಗೆ ಯಾವುದೇ ವಿಷಯವೂ ಆದೀತು. ಇಂಥಾದ್ದೇ ವಿಚಾರದ ಮೇಲೆ ಸಂಶೋಧನೆ ನಡೆಸಬೇಕು ಎಂದೇನೂ ಇಲ್ಲ. ವಿಜ್ಞಾನ, ಸಾಹಿತ್ಯ, ಕಲೆ, ಅರ್ಥಶಾಸ್ತ್ರ ಸಮಾಜಶಾಸ್ತ್ರ ಮೊದಲಾಗಿ ಹಲವು ವಿಷಯಗಳು ಇವೆ. ತಮ್ಮ ಅಭಿರುಚಿ ಹಾಗೂ ಸಂಗ್ರಹವಿರುವ ಮಾಹಿತಿಗಳ ಆಧಾರದ ಮೇಲೆ ಸಂಶೋಧನೆಯ ದಾರಿ ಆರಂಭವಾಗುತ್ತದೆ. ಸಾಹಿತ್ಯ ಕೂಡಾ ಒಂದು ವಿಸ್ತಾರವಾದ ಕ್ಷೇತ್ರವಾಗಿದೆ. ಸಾಹಿತ್ಯದಲ್ಲಿ ಸಂಶೋಧನೆ ಎಂದರೆ ಅನೇಕರು ತಮಾಷೆ ಮಾಡುವುದಿದೆ. ನೂರಾರು ಪುಸ್ತಕವನ್ನೋದಿ ಒಂದು ಪುಸ್ತಕ ಬರೆಯುವುದು ಎಂಬ ಬಾಲಿಶ ನಂಬಿಕೆಯವರೂ ಇದ್ದಾರೆ. ತೆಲುಗಿನಲ್ಲಿ ಥೀಸೀಸ್ ಎಂದರೆ "ತೀಸಿ ತೀಸಿ ರಾಸೇದೇ ಥೀಸೀಸ್"-ಅಲ್ಲಿಂದಿಲ್ಲಿಂದ ಹೆಕ್ಕಿ ಬರೆಯುವುದೇ ಥೀಸಿಸ್ಸು ಎಂಬ ಸಾಮತಿಯೂ ಆಗಿಹೋಗಿದೆ. ಹಾಗೆ ನೋಡಿದರೆ ಸಾಹಿತ್ಯದಂಥ ಕ್ಷೇತ್ರದಲ್ಲಿ ಸಂಶೋಧನೆ ನಡೆಸುವುದು ಅದೆಷ್ಟು ಕಷ್ಟ ಎಂಬುದು ತಿಳಿದಿರುವವರಿಗೇ ಗೊತ್ತು. ಸಂಶೋಧನಾ ಲೋಕವೆನ್ನುವುದು ಸಾಹಿತ್ಯದಲ್ಲಾಗಲೀ ಬೇರಾವುದರಲ್ಲೇ ಆಗಲೀ ವ್ಯಾಕರಣ ಶಾಸ್ತ್ರದಂತೆ ಶುಷ್ಕವಾದುದೆಂದು ಹೇಳುವುದುಂಟು. ಆದರೆ ಇದನ್ನು ಒಪ್ಪಬೇಕಾಗಿಲ್ಲ. ಸಂಶೋಧನಾ ಕ್ಷೇತ್ರದಲ್ಲಿ ಸಂಶೋಧಕನಿಗಿರುವ ಅರಿವು, ಅನುಭವ, ಆಸಕ್ತಿಗಳನ್ನು ಹೊಂದಿಕೊಂಡು ಆತನಿಗೆ ಅದು ಅತ್ಯಂತ ಹರ್ಷದಾಯಕವಾಗುತ್ತದೆ. ಸೃಜನಶೀಲ ವ್ಯಕ್ತಿಗಳಿಗಂತೂ ಇದು ತುಂಬಾ ಅಭಿರುಚಿಯನ್ನು ಹುಟ್ಟಿಸುತ್ತದೆಂಬುದರಲ್ಲಿ ಸಂದೇಹವೇ ಇಲ್ಲ. ವೈಜ್ಞಾನಿಕ ಕ್ಷೇತ್ರದಲ್ಲಿ ಪ್ರಯೋಗಗಳ ಮುಖಾಂತರ ಕರಾರುವಕ್ಕಾಗಿ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳಬಹುದು. ಆದರೆ ಸಾಹಿತ್ಯ ಕ್ಷೇತ್ರದಲ್ಲಿ ಸತತ ಅಭ್ಯಾಸ, ಚಿಂತನಶೀಲತೆಯಿಂದ ಮಾತ್ರ ಹತ್ತಿರದ ಒಂದು ನಿಲುವಿಗೆ ತಲುಪಬಹುದು. ಸಾಹಿತ್ಯ ಕ್ಷೇತ್ರದಲ್ಲಿನ ಸಂಶೋಧನೆಯೆಂದರೆ ಪುಟವಿಟ್ಟ ಚಿನ್ನದಂತೆ.

ಹಾಗೆ ನೋಡಿದರೆ ಈ ಪ್ರಪಂಚದಲ್ಲೇ ಹೊಸದಾಗಿ ಹೇಳುವ ವಿಚಾರ ಎಂಬುದೇ ಇರುವುದಿಲ್ಲ. ವಿಜ್ಞಾನವಾಗಲೀ, ಸಾಹಿತ್ಯವಾಗಲೀ, ಕಲೆಯಾಗಲೀ ಯಾವ ಕ್ಷೇತ್ರದಲ್ಲೇ ಆಗಲಿ ಹೊಸದಾಗಿ ಅಥವಾ ನವೋನವ್ಯವಾದ, ಇದುವರೆಗೆ ಯಾರು ಹೇಳದೇ ಇರುವ ವಿಚಾರ ಎಂಬುದೇ ಇಲ್ಲ. ಇದನ್ನೇ ಇನ್ನೊಂದು ರೀತಿಯಲ್ಲಿ

Re-Search ಎಂಬುದಾಗಿ ಸರಿಯಾಗಿ ಹೇಳಿದ್ದಾರೆ. ಹಾಗಾಗಿ ಸಂಶೋಧನೆ ಎಂದರೆ ವಿಜ್ಞಾನಕ್ಕೆ ಮಾತ್ರವೆಂದಾಗಲೀ ಸಾಹಿತ್ಯಕ್ಕೆ ತಮಾಷೆಯ ವಿಷಯವೆಂದಾಗಲೀ ಭ್ರಮಿಸಿಕೊಳ್ಳಬಾರದು.

## 2.2 ವಿಷಯದ ಬಗೆಗಳು :

ಕನ್ನಡದಂತೆ ಅನೇಕ ಭಾಷೆಗಳಲ್ಲಿ ಸಾಹಿತ್ಯ ರಚನೆಗಳಿವೆ. ಸಾಹಿತ್ಯವೆಂದರೆ ವಿಸ್ತೃತಾರ್ಥದಲ್ಲಿ ಯಾವುದೇ ಪುಸ್ತಕವೆಂದೂ ಗ್ರಹಿಸಿಕೊಳ್ಳಬಹುದು. ಸಾಹಿತ್ಯದಲ್ಲಿ ಸಂಶೋಧನೆಗೆ ಅದೆಷ್ಟೋ ವಿಭಾಗಗಳನ್ನಾಗಿ ಮಾಡಿಕೊಳ್ಳಬಹುದು. ಸಾಹಿತ್ಯಚರಿತ್ರೆ, ಕವಿಚರಿತ್ರೆ, ಕವಿಕಾಲನಿರ್ಣಯ, ವಿಮರ್ಶೆ, ಕಾವ್ಯವಿಮರ್ಶೆ, ಗ್ರಂಥ ಸಂಪಾದನೆ, ತೌಲನಿಕ ವಿಮರ್ಶೆ – ಹೀಗೆ ಹಲವು ವಿಷಯಗಳನ್ನು ನೋಡಬಹುದು. ಒಬ್ಬನಿಗೇ ಇವನ್ನೆಲ್ಲಾ ಸಂಶೋಧನೆ ನಡೆಸುವುದು ಅಸಾಧ್ಯ. (ಸಂಶೋಧಕ ತನ್ನ ಆಸಕ್ತಿ ಅಭಿರುಚಿಗಳ ಆಧಾರದಿಂದ ಅಧ್ಯಯನ ನಡೆಸಿ ಮುಂದೆ ಇಂತಹ ವಿಚಾರದಲ್ಲಿ ತನ್ನ ಸಂಶೋಧನೆ ಸಾಗಬೇಕಾಗಿದೆ ಎಂಬ ತೀರ್ಮಾನಕ್ಕೆ ಬರಬೇಕು.)

## 2.3 ವಿಷಯ ಚಿಂತನೆ ಆಯ್ಕೆ :

ಸಂಶೋಧನೆಗೆ ವಿಷಯವನ್ನು ಆಯ್ದುಕೊಳ್ಳುವಾಗ, ಒಂದು ನಿರ್ದಿಷ್ಟ ವಿಷಯದ ಬಗ್ಗೆ ಪರಿಪೂರ್ಣವಾದ ಮಾಹಿತಿಗಳನ್ನು ಪಡೆದಿರಬೇಕಾಗುತ್ತದೆ. ಈವರೆಗೆ ಆ ಕ್ಷೇತ್ರದಲ್ಲಿ ಎಷ್ಟು ಮಂದಿ ಕೆಲಸ ನಡೆಸಿದ್ದಾರೆ, ಎಷ್ಟು ಕೃತಿಗಳು ಹಾಗೂ ಲೇಖನಗಳು ಪ್ರಕಟವಾಗಿವೆ, ಸಂಶೋಧನೆ ನಡೆಸಲು ಇನ್ನೆಷ್ಟು ಅವಕಾಶವಿದೆ – ಎಂಬ ಈ ಮೂಲಭೂತ ವಿಚಾರಗಳನ್ನು ಸಂಶೋಧಕ ಚೆನ್ನಾಗಿ ತಿಳಿದುಕೊಂಡಿರಬೇಕು. ಇದಕ್ಕೆ ನಿರಂತರವಾದ ಅಧ್ಯಯನವನ್ನು ನಡೆಸಿರಬೇಕು ಹಾಗೂ ಮಾರ್ಗದರ್ಶಿಯವರನ್ನು ಸಂಪರ್ಕಿಸಬೇಕು. ವಿಶ್ವವಿದ್ಯಾನಿಲಯಗಳ ಮಟ್ಟದಲ್ಲಿ ಸಾಹಿತ್ಯದ ವಿವಿಧ ಘಟಕಗಳ ಬಗೆಗೆ ನಡೆಯುತ್ತಿರುವ ಸಂಶೋಧನೆಗಳ ವಿಚಾರದಲ್ಲಿ ಪೂರ್ವ ಮಾಹಿತಿ ಪಡೆದುಕೊಂಡರೆ ತುಂಬಾ ಪ್ರಯೋಜನವಾಗುವುದು. ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಸಂಶೋಧನೆ ನಡೆಸುವ ಬಗೆಗೆ ಅಲ್ಲಲ್ಲಿಗೆ ಹೋಗಿ ತಿಳಿಯಬಹುದು. ಅಥವಾ ಸಂಬಂಧಪಟ್ಟವರಿಂದ ಬರೆದು ತಿಳಿದುಕೊಳ್ಳಬಹುದು. ಇಂದು ಕನ್ನಡ ಸಾಹಿತ್ಯದ ಬಗೆಗೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲದೆ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯ, ಉಸ್ಮಾನಿಯಾ ವಿ.ವಿ., ಹೈದರಾಬಾದ್, ಮಧುರೈ ಕಾಮರಾಜ ವಿ.ವಿ., ಬೊಂಬಾಯಿ ವಿ.ವಿ., ಮದರಾಸುವಿ.ವಿ., ಕಲ್ಲಿಕೋಟೆ ವಿ.ವಿ.ಯ ಸ್ನಾತಕೋತ್ತರ ಅಧ್ಯಯನವಿಭಾಗ, ಕಾಸರಗೋಡು ಮೊದಲಾದ ಹೊರ ರಾಜ್ಯಗಳ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷಾ ಸಾಹಿತ್ಯಗಳಲ್ಲದೆ, ತೌಲನಿಕವಾಗಿಯೂ ಅಧ್ಯಯನ ನಡೆಯುತ್ತಿದೆ. ಆದುದರಿಂದ

ಮೇಲೆ ಕಾಣಿಸಿದ ಎಲ್ಲ ವಿ.ವಿ. ಗಳಲ್ಲಿ ನಡೆಯುತ್ತಿರುವ, ನಡೆದಿರುವ ವಿಷಯಗಳ ಬಗೆಗಿನ ಸಂಶೋಧನೆಯ ಪೂರ್ವ ಮಾಹಿತಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಪಡೆದು ಕೊಳ್ಳಬೇಕು. ಇದರಿಂದ ಸಂಶೋಧನಾ ವಿಷಯಗಳನ್ನು ಆಯ್ಕೆ ಮಾಡುವಾಗ ನಡೆಯಬಹುದಾದ ಪುನರಾವರ್ತನೆಯನ್ನು ತಡೆಗಟ್ಟಬಹುದು.

## 2.4 ಸಂಶೋಧನಾ ಕ್ಷೇತ್ರ ಪರಿಚಯ – ಅರಿವು :

ಸಾಮಾನ್ಯವಾಗಿ ಕರ್ನಾಟಕದ ಹೊರಗಡೆ ನಡೆಯುತ್ತಿರಬಹುದಾದ ಕನ್ನಡದ ಬಗೆಗಿನ ಸಂಶೋಧನೆಯು ಕರ್ನಾಟಕದಲ್ಲಿ ಗೊತ್ತಿಲ್ಲದೆ ಹೋಗಬಹುದು. ಇಂಥಾದ್ದು ಆಗದಂತೆ ನೋಡಿಕೊಳ್ಳುವಲ್ಲಿ ಸಂಶೋಧಕ ಸದಾ ಗಮನವಿಟ್ಟಿರಬೇಕು. ಹೊರ ರಾಜ್ಯ ಗಳಲ್ಲಿ ಸಂಶೋಧನೆ ನಡೆಸುವವರಿಗೆ ಕೆಲವೊಂದು ಅನುಕೂಲತೆಗಳಿವೆ, ಅನಾನುಕೂಲತೆ ಗಳೂ ಇವೆ. ಹೊರ ರಾಜ್ಯಗಳ ವಿ.ವಿ. ಗಳಲ್ಲಿ ಕನ್ನಡವು ಕೇವಲ ಕಿರಿಯ ವಿಭಾಗ ವಾಗಿ ಇರುತ್ತದೆ. ಅಂಥಾ ಕಡೆಗಳಲ್ಲಿ ಗ್ರಂಥಾಲಯದಲ್ಲಿ ಕನ್ನಡದ ಮುಖ್ಯವಾದ ಕೃತಿಗಳೆಲ್ಲವೂ ಲಭ್ಯವಿರಬಹುದೆಂದು ಹೇಳಬರುವುದಿಲ್ಲ. ಆದರೆ ಆಯಾ ಪ್ರಾದೇಶಿಕ ಭಾಷೆಯ ಪರಿಚಯ ಮಾಡಿಕೊಂಡರೆ ಆ ಭಾಷೆಯ ಸಾಹಿತ್ಯದೊಂದಿಗೆ ತೌಲನಿಕವಾದ ಅಧ್ಯಯನವನ್ನು ನಡೆಸಬಹುದು. ತಮ್ಮ ಭಾಷೆಯಲ್ಲದೆ ಉಳಿದ ಭಾಷೆಗಳನ್ನು ಕಲಿಯಲು ಹೆಚ್ಚಿನ ಅವಕಾಶವೂ ಇರುತ್ತದೆ. ಇದೇ ರೀತಿಯ ಅನುಕೂಲತೆ–ಅನಾನು ಕೂಲತೆ ಕರ್ನಾಟಕದ ವಿ.ವಿ. ಗಳಲ್ಲಿನ ಸಂಶೋಧಕರಿಗೂ ಇರುತ್ತದೆ. ಹೊರನಾಡ ವಿ.ವಿ. ಗಳಲ್ಲಿ ಕನ್ನಡದ ಬಗೆಗೆ ನಡೆಸಲಾಗುವ ಸಂಶೋಧನೆಗಳ ಕುರಿತು ಅವರೂ ತಿಳಿದಿರಬೇಕಾಗುತ್ತದೆ. ಮದರಾಸು, ಬೊಂಬಾಯಿಗಳಂತಹ ಅತ್ಯಂತ ಹಳೆಯ ವಿ.ವಿ. ಗಳ ಗ್ರಂಥಾಲಯುಗಳಲ್ಲಿ ಕನ್ನಡದ ಅಪರೂಪದ ಕೃತಿಗಳು ದೊರೆಯಬಹುದು. ಹೊರ ನಾಡ ಕನ್ನಡ ಸಂಶೋಧಕರಿಗೆ ತೌಲನಿಕ ಅಧ್ಯಯನಗಳನ್ನು ನಡೆಸಲು ಅವಕಾಶ ಹೆಚ್ಚಿದೆ ಎನ್ನಬಹುದು.

## 2.5 ವಿಷಯದ ಆಯ್ಕೆ :

ಸಂಶೋಧನೆಗೆ ವಿಷಯವನ್ನು ಆಯ್ದುಕೊಳ್ಳುವುದೂ ಒಂದು ಪುಟ್ಟ ಸಂಶೋ ಧನೆಯೇ ಆಗುತ್ತದೆ. ಈ ವರೆಗೆ ಸಾಕಷ್ಟು ಕೆಲಸ ನಡೆಯದೇ ಇರುವ ಕ್ಷೇತ್ರ ವೊಂದನ್ನು ಹುಡುಕುವುದೂ ಮಹತ್ವದ ಕೆಲಸವೇ.

ಸಂಶೋಧನಾ ಕ್ಷೇತ್ರವೆಂಬುದು ವಿಸ್ತಾರವಾದುದು. ಯಾರೂ ಇದರಲ್ಲಿ ಕೆಲಸ ಮಾಡಬಹುದು. ವಿ.ವಿ. ಮಟ್ಟದಲ್ಲಿ ಇದನ್ನು ನಡೆಸಲು ಬಯಸುವವರಿಗೆ ಆಯಾ ವಿಷಯಗಳಲ್ಲಿ ಸ್ನಾತಕೋತ್ತರ ಪದವಿಯ ಅಗತ್ಯವಿದೆ. ಅದರಲ್ಲೂ 55 ಶೇಕಡಾ ಅಂಕ

ಗಳಿಗಿಂತ ಹೆಚ್ಚು ಪಡೆದವರಿಗಷ್ಟೇ ಶಿಷ್ಯವೇತನ/ಸ್ಕಾಲರ್‌ಶಿಪ್‌ಗಳು ದೊರೆಯುತ್ತವೆ. ಸಂಶೋಧಕನೆಂದರೆ ಆತ ಸ್ನಾತಕೋತ್ತರ ಪದವಿ ಪಡೆದು ವಿಷಯದ ಆಯ್ಕೆ ಕೈಗೊಂಡಿರುತ್ತಾನೆ ಎಂದು ಸಾಮಾನ್ಯವಾಗಿ ತಿಳಿಯಬಹುದು.

ವಿಷಯದ ಆಯ್ಕೆಯನ್ನು ಮಾಡುವಾಗ ಅದರ ಬಗೆಗೆ ಈವರೆಗೆ ಅದೆಷ್ಟು ಮಂದಿ ಕೆಲಸ ನಡೆಸಿದ್ದಾರೆಂಬ ಸ್ಪಷ್ಟ ಮಾಹಿತಿಯನ್ನರಿಸಿಕೊಂಡಿರುವುದರ ಜೊತೆಗೆ ಯಾವುದೇ ಭಯವಿರಬಾರದು. ಎಂದರೆ ದೊಡ್ಡ ವಿದ್ವಾಂಸರು ಸಂಶೋಧನೆ ನಡೆಸಿರಬಹುದಾದ ವಿಷಯಗಳನ್ನು ತಮ್ಮ ಸಂಶೋಧನೆಯ ವಿಷಯವನ್ನಾಗಿ ಆರಿಸಿಕೊಳ್ಳಬಾರದು ಎಂದು ಭಾವಿಸಬಾರದು. ಆಯಾ ವಿಷಯದಲ್ಲಿ ಸಂಶೋಧನೆಗೆ ಅವಕಾಶವಿದೆ ಎಂದು ಖಚಿತ ಪಡಿಸಿಕೊಂಡ ನಂತರವಷ್ಟೆ ಅದನ್ನು ಆಯ್ದುಕೊಳ್ಳಬೇಕು. ಏಕೆಂದರೆ ದೊಡ್ಡ ವಿದ್ವಾಂಸರೆನಿಸಿಕೊಂಡವರೂ ಅನೇಕ ಸಲ ತಪ್ಪು ಮಾಡುವುದುಂಟು. ಅಥವಾ ಆ ಕ್ಷೇತ್ರವನ್ನು ಅವರು ಗಮನಿಸದೇ ಹೋಗಿರಬಹುದು. ಉಳಿದವರ ತಪ್ಪನ್ನು ಹುಡುಕುವುದೇ ಸಂಶೋಧನೆ ಎನಿಸಲಾರದು. ಆದರೂ ಅವರು ಮಾಡದೇ ಉಳಿಸಿರಬಹುದಾದ ಕೆಲಸವನ್ನು ಸರಿಯಾಗಿ ಮುಗಿಸಬಹುದು ಎಂಬುದಕ್ಕಾಗಿಯೂ ಆಗಬಹುದು. ವಿದ್ವಾಂಸ ಹೇಳಿದ್ದೆಲ್ಲಾ ಸರಿ ಎಂದು ಅಂಧವಾಗಿ ಸ್ವೀಕರಿಸಬೇಕಾದ್ದಿಲ್ಲ. ಸರಿಯಾದುದನ್ನು ಸರಿಯಾಗಿಯೇ ಗ್ರಹಿಸಿ ಅರ್ಥ ವಿವರಣೆ ಮಾಡುವುದರೊಂದಿಗೆ ಸರಿಯಲ್ಲದುದನ್ನು ಸರಿಯಲ್ಲವೆಂದೇ ಹೇಳುವ ನಿಷ್ಪಕ್ಷಪಾತತನವನ್ನು ಸಂಶೋಧಕನು ರೂಢಿಸಿಕೊಳ್ಳಬೇಕು. ಇಲ್ಲಿ ವ್ಯಕ್ತಿ ಘನತೆ ಮುಖ್ಯವಲ್ಲ, ವಸ್ತುವಿನ ಸತ್ಯನಿಷ್ಠತೆ ಮುಖ್ಯವಾಗುತ್ತದೆ.

## 2.6 ಸಂಶೋಧನೆಯ ಕಾಲ-ಮಿತಿ ಪ್ರಜ್ಞೆ :

ವಿಷಯದ ಆಯ್ಕೆಯು ಸಂಶೋಧಕನಿಗೆ ಲಭ್ಯವಿರುವ ಸಮಯಾವಕಾಶದ ಮೇಲೆ ಹೊಂದಿಕೊಂಡಿದೆ. ಅತ್ಯಂತ ವಿಸ್ತಾರವಾದ ವಿಷಯವನ್ನು ಕೇವಲ ಮೂರು ನಾಲ್ಕು ವರ್ಷಗಳಲ್ಲಿ ಸಂಶೋಧನೆ ನಡೆಸಲು ಅಸಾಧ್ಯವಾಗದೇ ಹೋಗುವ ಅಪಾಯವಿದೆ. ಹಾಗೆಂದು ಕೇವಲ ಚಿಕ್ಕ ವಿಷಯವನ್ನು ಮೂರು ನಾಲ್ಕು ವರ್ಷಗಳವರೆಗೆ ದೂಡುತ್ತಿರುವ ಸಂಶೋಧನೆಯು ಜಾಳಾಗುವ ಸಂಭವವೂ ಇರುತ್ತದೆ. ವಿಷಯದ ಆಯ್ಕೆಯ ಹಿಂದೆ ಸಂಶೋಧಕನ ಆಸಕ್ತಿಗೂ ಮಾನ್ಯತೆ ಇದೆ. ಗದ್ಯದಲ್ಲಿ ಆಸಕ್ತನಾದ ಸಂಶೋಧಕನು ಪದ್ಯವನ್ನೋ ಬೇರೇನನ್ನೋ ಆಯ್ದುಕೊಂಡರೆ ಆ ಸಂಶೋಧನೆ ಪರಿಪೂರ್ಣವಾದೀತೆಂದು ಹೇಳಲು ಸಾಧ್ಯವಿಲ್ಲ. ಒಂದು ವೇಳೆ ಪರಿಪೂರ್ಣವಾದರೂ, ಸಂಶೋಧಕ ಒಮ್ಮೆ ಒಂದು ವಿಷಯವನ್ನು ಆಯ್ದುಕೊಂಡ ಅನಂತರ ಆತ ಅದರಲ್ಲಿ ಪೂರ್ತಿಯಾಗಿ ತನ್ನ ಅಭಿರುಚಿಯನ್ನು ಬೆಳೆಸಿಕೊಂಡು ಅಧ್ಯಯನ ನಡೆಸಿದರೆ ಮಾತ್ರ ಆ ಸಂಶೋಧನೆ ಅರ್ಥವತ್ತಾಗುತ್ತದೆ. ಆದಕಾರಣ ಸಂಶೋಧನೆಯ ವಿಷಯದ ಆಯ್ಕೆಯಲ್ಲಿ ಸ್ವಂತಿಕೆ ಇರಬೇಕೇ ಹೊರತು ಬಲವಂತದಿಂದ ಹೇರಿಕೊಂಡಂತೆ ಇರಬಾರದು.

**2.7 ಮಾಹಿತಿ ಸಂಗ್ರಹಣಾ ಕಾರ್ಯ :**

ಸಂಶೋಧಕ ಮಾಹಿತಿ ಸಂಗ್ರಹಣೆ ಮಾಡುವಾಗ ಕ್ರಮಬದ್ಧವಾಗಿ ಈ ರೀತಿಯ ವಿಂಗಡಣೆಯನ್ನು ಮಾಡಿಕೊಳ್ಳಬಹುದು.

**ಮಾಹಿತಿ ಕೇಂದ್ರ** (Source of Information)

- ದಾಖಲೆಗಳ ಮೂಲಕ (Documents)
  - ಮೂಲ ಆಕರ (Primary)
  - ಅನು ಆಕರ (Secondary)
  - ಗೌಣ ಆಕರ (Tertiary)
- ಕ್ಷೇತ್ರಕಾರ್ಯದ ಮೂಲಕ (Field work)
  - ವೈಯುಕ್ತಿಕ (Personal)
  - ಎ) ಅಂಚೆ ಮೂಲಕ (Correspondence)
    ಬಿ) ಧ್ವನಿಪೆಟ್ಟಿಗೆಯ ಮುಖಾಂತರ (Tape Recorder)

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸುವಾಗ ಮೂಲ ಆಕರಕ್ಕೆ (Primary Source) ಅತ್ಯಂತ ಹೆಚ್ಚಿನ ಆದ್ಯತೆಯನ್ನು ಕೊಡಬೇಕಾಗುತ್ತದೆ. ಮೂಲ ಆಕರ ದೊರಕದೇ ಹೋದಾಗ ಅನು ಆಕರದತ್ತ (Secondary) ಗಮನ ಕೊಡಬಹುದು. ಆದರೂ ಸಂಶೋಧಕನ ಮೂಲ ಉದ್ದೇಶ ಮೂಲ ಆಕರವನ್ನು ಪಡೆಯುವುದೇ ಆಗಿರಬೇಕು. ಯಾವಾಗಲೂ ನೇರವಾಗಿ ಕಂಡುಕೊಳ್ಳುವ ಆಕರಕ್ಕೆ ಬೆಲೆ ಹೆಚ್ಚು. ಕ್ಷೇತ್ರಕಾರ್ಯದಲ್ಲೂ ಹಾಗೆಯೇ, ಸಂಶೋಧಕ ತಾನೇ ಕಂಡುಕೊಳ್ಳುವ ಆಕರಕ್ಕೆ ಬೆಲೆ. ಜಾನಪದ ವಿಷಯಗಳಿಗೆ ಮಾಹಿತಿ ಸಂಗ್ರಹಿಸುವಲ್ಲಿ ಕ್ಷೇತ್ರ ಕಾರ್ಯವೇ ಪ್ರಧಾನವಾಗಿರುತ್ತದೆ. ಸಾಹಿತ್ಯದ ಸಂಶೋಧನೆಯಲ್ಲಿ ಕ್ಷೇತ್ರ ಕಾರ್ಯಗಳಿಗೆ ಅವಕಾಶ ಕಡಿಮೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ವರೆಗೆ ಪ್ರಕಟವಾದ ಕೃತಿಗಳಿಂದ ಆಕರಗಳನ್ನು ಪಡೆಯಬಹುದಾದರೂ ಅವೆಲ್ಲವೂ ಒಂದೊಂದು ಬೌದ್ಧಿಕ ಸ್ತರಗಳಿಂದ ಹೆಣೆದಂತಹ ವಿಷಯಗಳಾಗಿರುವುದರಿಂದ ಅವುಗಳನ್ನು ಚೆನ್ನಾಗಿ ವಿಶ್ಲೇಷಿಸಿ, ವಿಮರ್ಶಿಸಿ ತೂಗಿ ನೋಡಬೇಕಾಗುತ್ತದೆ. ಈ ವಿಧಾನವು ಮೊದಲೇ ಹಾಕಿಕೊಂಡ ಸಂಶೋಧನಾ ವಿನ್ಯಾಸದ ಆಧಾರದ ಮೇಲೆ ನಡೆಯುತ್ತಿದ್ದರೆ ಕೆಲಸವು ಕ್ರಮಬದ್ಧವೆನಿಸುತ್ತದೆ. ಮುಂದೆ ನಿಬಂಧ ರಚನೆಯಲ್ಲಿ ಸುಲಭವಾಗುತ್ತದೆ. ಸಂಶೋಧನಾ ವಿನ್ಯಾಸವನ್ನು ಹಾಕಿಕೊಳ್ಳುವಾಗ ಆಕರಗಳು ಲಭ್ಯವಾಗುತ್ತಿರುವಂತೆ ನಿಬಂಧ ರಚನೆಯ ವಿಭಾಗಗಳು ಮೂಡಿಕೊಳ್ಳುತ್ತಾ ಹೋಗುತ್ತವೆ. ಯಾವ ರೀತಿಯಲ್ಲಿ ನಿಬಂಧವನ್ನು ವಿಭಾಗ ಮಾಡಿಕೊಳ್ಳಬಹುದು, ಎಷ್ಟು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಬಹುದು ಎಂಬಿತ್ಯಾದಿ ವಿಚಾರಗಳು ಹೊಳೆಯುತ್ತದೆ. ಸಂಶೋಧನೆಯ ಚೌಕಟ್ಟಿನಲ್ಲೇ ಇದೂ ಸೇರಿಕೊಳ್ಳುತ್ತದೆ. ಸಂಶೋಧಕ ತನ್ನ ವಿಷಯದ ಮೇಲೆ ಕ್ರಮಬದ್ಧವಾಗಿ ಜೋಡಿಸಿಕೊಳ್ಳುವ ವಿಧಾನವೇ ಸಂಶೋಧನಾ ಚೌಕಟ್ಟು ಆಗಿರುತ್ತದೆ. ಇದರಿಂದ ಆತನ ಸಂಶೋಧನೆಗೂ ಸುಲಭ, ಸಂಶೋಧನಾ ನಿಬಂಧ ರಚನೆಯೂ ಸುಲಭವಾಗಿ ಕ್ರಮವಾಗಿ ಸಾಗುತ್ತದೆ.

## 2.8 ಉಪಸಂಹಾರ :

ಸಂಶೋಧಕ ವಿಷಯದ ಆಯ್ಕೆಯನ್ನು ನಡೆಸಿದ ಮೇಲೆ ಯಾವಾಗಲೂ ಆ ವಿಷಯದ ಬಗೆಗೇ ಚಿಂತಿಸುತ್ತಿರಬೇಕು. ಆ ವಿಷಯದ ವ್ಯಾಪ್ತಿಯೆಷ್ಟು, ಈ ವರೆಗೆ ಅದರ ಬಗೆಗೆ ಎಷ್ಟು ಕೆಲಸ ನಡೆದಿದೆ, ಯಾವ ಮಟ್ಟದಲ್ಲಿ ನಡೆದಿದೆ, ಯಾವ ಯಾವ ವಿದ್ವಾಂಸರು ನಡೆಸಿದ್ದಾರೆ. ಎಷ್ಟು ಪುಸ್ತಕಗಳು ಲಭ್ಯವಿವೆ, ಯಾವ ಗ್ರಂಥಾಲಯಗಳಲ್ಲಿ ಲಭ್ಯವಿವೆ, ತಾನು ಇನ್ನು ಎಷ್ಟು ಕೆಲಸ ನಡೆಸಬಹುದು, ಯಾವ ರೀತಿಯಲ್ಲಿ ಮಾಡಬಹುದು. ಇತ್ಯಾದಿ ಪ್ರಶ್ನೆಗಳನ್ನು ಹಾಕಿಕೊಂಡು, ಅವುಗಳಲ್ಲಿ ಉತ್ತರವನ್ನು ಕಂಡುಕೊಳ್ಳಲು ಸದಾ ಪರಿಶ್ರಮಿಸಬೇಕು. ಹೀಗೆ ಒಂದೊಂದಾಗಿ ಪ್ರಶ್ನೆಗಳನ್ನು

ಹಾಕುತ್ತ, ಅವುಗಳಿಗೆಲ್ಲ ಉತ್ತರವನ್ನು ಕಂಡುಕೊಳ್ಳುವುದೇ ಸಂಶೋಧನೆಯಾಗುತ್ತದೆ. ಹೀಗೆ ಪಡೆದ ಉತ್ತರಗಳನ್ನು ಕ್ರಮಬದ್ಧವಾಗಿ ಜೋಡಿಸಿ ತನ್ನದೇ ಮಾತುಗಳಲ್ಲಿ ಪ್ರಸ್ತುತಪಡಿಸುವುದೇ ಸಂಶೋಧನೆಯಾಗುತ್ತದೆ. ಇದರ ಕ್ರಮಬದ್ಧ ತಿಳಿವೇ ಸಂಶೋ-ಧನಾ ವಿಧಾನದ ಶಾಸ್ತ್ರವಾಗುತ್ತದೆ. ಸಂಶೋಧನೆಯಲ್ಲಿ ನಾವು ಏನನ್ನು ಹೇಳುತ್ತೇವೆಂಬುದು ಎಷ್ಟು ಮುಖ್ಯವೋ, ಹೇಗೆ ಹೇಳುತ್ತೇವೆಂಬುದೂ ಅಷ್ಟೇ ಮುಖ್ಯವಾಗುತ್ತದೆ. ಇದು ಸಂಶೋಧನಾಶಾಸ್ತ್ರದ ಹಿನ್ನೆಲೆಯಲ್ಲಿ ಕ್ರಮಬದ್ಧವಾಗಿದೆಯೇ ಎನ್ನುವುದೂ ಮುಖ್ಯವಾಗುತ್ತದೆ.

ಸಂಶೋಧನಾ ವಿಷಯದ ಆಯ್ಕೆಯಲ್ಲಿಯೇ ಸಂಶೋಧಕ ಎಚ್ಚರದಿಂದಿರಬೇಕು. ಒಮ್ಮೆ ವಿಷಯದ ಆಯ್ಕೆ ನಡೆಸಿದ್ದಾಯಿತೆಂದರೆ ಅರ್ಧ ಹೊರೆಯನ್ನು ಇಳಿಸಿದಂತೆಯೇ. ನಂತರ ಉತ್ತರಗಳ ಹುಡುಕುವಿಕೆ ಹಾಗೂ ಕ್ರಮಬದ್ಧ ಜೋಡಣೆ ಸಂಶೋಧನೆಯ ಮಹತ್ವದ ಘಟ್ಟವಾಗುತ್ತದೆ. ಕೇವಲ ವಿಷಯದ ಆಯ್ಕೆ ನಡೆಸಿದಾಕ್ಷಣ ಸಂಶೋಧನಾ ಕಾರ್ಯವಾಯಿತೆಂದು ತಿಳಿಯಬಾರದು. ಆಯ್ದ ವಿಷಯಕ್ಕೆ ತಕ್ಕಂತೆ ಸಂಶೋಧಕನಿಗೆ ಒದಗಿ ಇರುವ ಸಮಯಾವಕಾಶ, ಪರಿಕರಗಳು ಮೊದಲಾದ ಸೀಮಿತ ವ್ಯಾಪ್ತಿಯೊಳಗೆ ಹಾಕಿಕೊಳ್ಳಬೇಕಾಗಿರುವ ರೂಪರೇಷೆಗಳೇ ಸಂಶೋಧನಾ ವಿನ್ಯಾಸ (Research Design) ಎಂದೆನ್ನಿಸಿಕೊಳ್ಳುತ್ತದೆ.

ಸಂಶೋಧನಾ ವಿನ್ಯಾಸವನ್ನು ಹಾಕಿಕೊಳ್ಳುವಾಗ ಮಾರ್ಗದರ್ಶಕರ ನೆರವು ಅತ್ಯಗತ್ಯ. ಸಂಶೋಧಕನ ಸಾಮರ್ಥ್ಯ ಹಾಗೂ ಆತನ ಇತಿ-ಮಿತಿಗಳನ್ನನುಸರಿಸಿ ಈ ವಿನ್ಯಾಸವನ್ನು ಹಾಕಿಕೊಳ್ಳಬೇಕಾಗುತ್ತದೆ. ಇದರಿಂದಾಗಿ ತನ್ನ ಸಂಶೋಧನೆಯ ಆಳ-ವಿಸ್ತಾರಗಳನ್ನು ಒಂದು ಪರಿಮಿತಿಯೊಳಗೆ ತಂದುಕೊಳ್ಳುವುದಕ್ಕೆ ಸಹಾಯಕವಾಗುತ್ತದೆ.

ಸಂಶೋಧಕನು ತನ್ನ ಸಂಶೋಧನಾ ವಿನ್ಯಾಸವನ್ನು ಹಾಕಿಕೊಳ್ಳುವ ಮೊದಲು ಆಲೋಚಿಸಬೇಕಾದ ಅಂಶಗಳು :

ಅ) ಸಂಶೋಧನಾ ವಿಷಯದ ಆಯ್ಕೆಗೆ ಕಾರಣ ಹಾಗೂ ಅದರ ಹಿನ್ನೆಲೆ.
ಆ) ಅಭ್ಯಾಸದ ಕ್ಷೇತ್ರ ಹಾಗೂ ಮಾಹಿತಿ ಸಂಗ್ರಹಣೆಯ ವಿಧಾನಗಳು.
ಇ) ಮಾಹಿತಿಗಳು ಲಭ್ಯವಿರುವ ಸ್ಥಳಗಳು, ಗ್ರಂಥಾಲಯಗಳು ಇತ್ಯಾದಿ.
ಈ) ಅಭ್ಯಾಸ ನಡೆಸಬೇಕಾದ ಜಾಗ ಮತ್ತು ಒದಗಿರುವ ಸಮಯಾವಕಾಶ.
ಉ) ಮಾಹಿತಿಗಳ ಸಂಗ್ರಹಣಾ ವಿಧಾನ.
ಊ) ವಿಷಯ ಸಂಗ್ರಹಣಾ ತಂತ್ರ–ಕ್ರಮ - ಗ್ರಂಥಾಲಯ, ಸಂದರ್ಶನ ಇತ್ಯಾದಿ.
ಋ) ಸಂಗ್ರಹಿತ ಮಾಹಿತಿಗಳ ವಿಷಯವಾರು ವಿಂಗಡಣೆ.

xix) ವಿಷಯ ಸಂಗ್ರಹಣೆ–ವಿಭಾಗಕ್ರಮ, ಸಂಶೋಧನೆಯ ಮಂಡನೆ, ಪ್ರಸ್ತುತ ಪಡಿಸುವುದು, ನಿಬಂಧ ರಚನೆ.

ವಿಷಯದ ಆಯ್ಕೆಯಿಂದ ತೊಡಗಿ ವ್ಯವಸ್ಥಿತವಾಗಿ ಅಧ್ಯಯನ ನಡೆಸಿ ಸಾಧಾರವಾಗಿ, ನಿಯಮಿತ ವೇಳೆಯಲ್ಲಿ, ಕ್ರಮಬದ್ಧವಾಗಿ ಪ್ರೌಢ ರೀತಿಯಲ್ಲಿ ಪ್ರಸ್ತುತ ಪಡಿಸುವುದೇ ಉತ್ತಮ ಸಂಶೋಧನೆ ಎನ್ನಿಸಿಕೊಳ್ಳುತ್ತದೆ.

# 3. ಸಂಶೋಧನ ವಿನ್ಯಾಸ

## 3.1 ಮುನ್ನುಡಿ :

ಕಟ್ಟಡ ತಂತ್ರಜ್ಞ ಮನೆ ಕಟ್ಟುವ ಮೊದಲು ವಿನ್ಯಾಸವನ್ನು (Design) ರೂಪಿಸಿಕೊಂಡಂತೆ, ಸಾಹಿತ್ಯ ಸಂಶೋಧಕ ತನ್ನ ಸಂಶೋಧನೆಯೆಂಬ ಕಟ್ಟಡಕ್ಕೆ ಒಂದು ವಿನ್ಯಾಸ ತಯಾರಿಸಿಕೊಳ್ಳಬೇಕಾಗುತ್ತದೆ. ಇದನ್ನೇ ಸಂಶೋಧನ ವಿನ್ಯಾಸ ಎಂದು ಕರೆಯುತ್ತಾರೆ.

ಯಾವುದೇ ಒಂದು ಕೆಲಸಕ್ಕೆ ಮುಂಚಿತವಾಗಿ ಅದರ ಉಗಮ-ಮೂಲ, ಆಧಾರ, ಬೆಳವಣಿಗೆ, ನಿರೂಪಣೆ ಇತ್ಯಾದಿ ಬಗೆಗೆ ಆಲೋಚನೆ ಮಾಡುವುದು ಸಹಜ. ಹಾಗೆಯೇ ಒಂದು ಕ್ಷೇತ್ರದಲ್ಲಿ ಸಂಶೋಧನೆಗೆ ತೊಡಗಿದ ಮೇಲೆ ಸಂಬಂಧಪಟ್ಟಂತೆ ಪರಿಕರ, ಪರಿಸರಗಳನ್ನು ಹುಡುಕಿ, ವಿಂಗಡಿಸಿ ಅದಕ್ಕೊಂದು ರೂಪ ಕೊಡಬೇಕಾದುದು ಸಂಶೋಧಕನ ಕರ್ತವ್ಯ.

ಸಂಶೋಧನೆಯ ವಿನ್ಯಾಸಕಾರ ತನ್ನ ಅನುಭವ, ಅಭ್ಯಾಸಕ್ಕೆ ತಕ್ಕಂತೆ ವಿನ್ಯಾಸ ವನ್ನು ರೂಪಿಸಿಕೊಳ್ಳುತ್ತಾನೆ. ಇದು ಒಂದು ರೀತಿಯಲ್ಲಿ ಮುಂದಿನ ಸಂಶೋಧನ ಪ್ರಬಂಧದ ಸಾಂಕೇತಿಕ ರೂಪ ಮಾತ್ರ. ಇಲ್ಲಿ ಆತನ ಉಪಕರಣಗಳು ವಾಸ್ತವಿಕ ಘಟನೆಗಳು ಹಾಗೂ ಅದನ್ನು ಆಧರಿಸಿ ಬಂದಿರುವ ನಿರ್ಣಯಗಳು ಮತ್ತು ಉಪಯುಕ್ತ ಲೇಖನಗಳು. ಕಟ್ಟಡ ತಂತ್ರಜ್ಞನಿಗೆ ತನ್ನ ಕ್ಷೇತ್ರದಲ್ಲಿ ಅನುಭವ, ಜ್ಞಾನವಿರುವಂತೆ ಸಾಹಿತ್ಯ ಸಂಶೋಧಕನಿಗೂ ಅವನ ಕ್ಷೇತ್ರದಲ್ಲಿ ಪಾಂಡಿತ್ಯ, ಜ್ಞಾನವಿರಬೇಕು. ಒಮ್ಮೆ ಸಂಶೋಧಕ ತನ್ನ ಮಾದರಿಯನ್ನು ರೂಪಿಸಿಕೊಂಡರೆ ಸಾಕು, ನಂತರದ ಕ್ರಮಬದ್ಧ ಘಟನಾಪರಂಪರೆಯ ನಿರೂಪಣೆ ಹಾಗೂ ಸೇರ್ಪಡೆ ತನ್ನಂತಾನೇ ಆತನ ಆಶಯ ಅಭಿ ವ್ಯಕ್ತಿಗೆ ತಕ್ಕಂತೆ ಬೆಳೆಯುತ್ತಾ ಹೋಗುತ್ತದೆ. ಇದೂ ಒಂದು ರೀತಿಯಲ್ಲಿ ಸಂಬಂಧಿ ಸಿದ ಸಂಶೋಧನೆಯ ವಿಷಯದ ಒಂದು ನೋಟ, ಹಾಗೆಯೇ ಪೂರ್ವಭಾವೀ ಸಿದ್ಧತೆ ಎಂದೂ ಹೇಳಬಹುದು.

## 3.2 ವಿನ್ಯಾಸದ ಎರಡು ವಿಧಗಳು :

ಸಂಶೋಧಕನಿಗೆ ಸಂಶೋಧನೆಯ ದಾರಿಯನ್ನು ತೋರಿಸುವ ಹಂತ ವಿನ್ಯಾಸ. ಸಂಶೋಧಕ ತಾನು ಸಂಶೋಧನೆ ನಡೆಸಲು ಉದ್ದೇಶಿಸಿರುವ ವಿಷಯದ ಬಗ್ಗೆ, ಅಭ್ಯಾಸ ನಡೆಸಲಿರುವ ವಿಧಿ, ವಿಧಾನ, ವಿಷಯ ಸಂಗ್ರಹಣೆ– ಇವೆಲ್ಲವೂ ಸಂಶೋಧನೆಯ

ವಿನ್ಯಾಸದಲ್ಲಿ ಒಳಗೊಳ್ಳುತ್ತದೆ. ಸಂಶೋಧನಾ ವಿನ್ಯಾಸವನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು.

ಅ) ಪ್ರಯೋಗಾತ್ಮಕ (Emperical)
ಆ) ವಿಶ್ಲೇಷಣಾತ್ಮಕ (Analytical)

ಕೆಲವು ಸಂಶೋಧನಾ ವಿಚಾರಗಳು ಎರಡೂ ಕ್ಷೇತ್ರಗಳಿಗೆ ಪ್ರಾಥಮಿಕ ಹಂತದಲ್ಲಿ ಸಮಾನವಾಗಿ ಇದ್ದು ನಂತರ ವ್ಯತ್ಯಸ್ತಗೊಳ್ಳುತ್ತಾ ಹೋಗುತ್ತದೆ.

ಅ) ಪ್ರಯೋಗಾತ್ಮಕ ವಿನ್ಯಾಸ : ಈ ವಿನ್ಯಾಸದಲ್ಲಿ ಆಯ್ದುಕೊಂಡ ಸಮಸ್ಯೆಯ ಉಚ್ಚಾರಣೆ, ಬಳಕೆ, ಹಿಂದಿನವರು ಈ ದಿಶೆಯಲ್ಲಿ ಪ್ರಯೋಗ ನಡೆಸಿದ ಕಾಲ, ರೀತಿ, ವಿಧಾನ, ಬೆಳವಣಿಗೆ, ಅದರ ಫಲಿತಾಂಶ – ಇವುಗಳ ಸ್ಪಷ್ಟ ಚಿತ್ರ ಕೊಟ್ಟು, ನಂತರ ಇಂದಿನ ಸಮಸ್ಯೆಗೆ ತಕ್ಕಂತೆ ಪರಿಹಾರ ಕಂಡುಕೊಳ್ಳಲಾಗುವುದು. ಈ ವಿಧಾನದಲ್ಲಿ ಕೆಲವು ಅನಿಸಿಕೆಗಳನ್ನೂ ತಳಹದಿಯನ್ನಾಗಿ ಇಟ್ಟುಕೊಳ್ಳಬಹುದು. ಈ ರೀತಿಯ ಸಂಶೋಧನೆ ವೈಜ್ಞಾನಿಕ ಕ್ಷೇತ್ರದಲ್ಲಿ ಮಾತ್ರ ಆಗತ್ಯ ಬೀಳುತ್ತದೆ.

ಆ) ವಿಶ್ಲೇಷಣಾತ್ಮಕ ವಿನ್ಯಾಸ : ಈ ವಿನ್ಯಾಸ ಹೆಚ್ಚಾಗಿ ಸಾಹಿತ್ಯ ಕ್ಷೇತ್ರಕ್ಕೇ ಹೇಳಿ ಮಾಡಿಸಿದಂತೆ. ಏಕೆಂದರೆ ಸಾಹಿತ್ಯ ಸಂಶೋಧನೆಯಲ್ಲಿ ವಿಷಯಕ್ಕೆ ಹೆಚ್ಚಿನ ಸಾಮಗ್ರಿ ದೊರೆತಂತೆಲ್ಲ ಸಮಸ್ಯೆಗೆ ಉತ್ತರವನ್ನು ನಿಖರವಾಗಿ ತಿಳಿದುಕೊಳ್ಳಲು ಸಾಧ್ಯ. ಮೊದಲಿಗೆ ಇದರಲ್ಲಿ ಖಚಿತತೆ ಇರುವುದಿಲ್ಲ, ಊಹಿಸಿಕೊಂಡ ವಿಚಾರವನ್ನು ಆಧಾರಪೂರ್ವಕವಾಗಿ ವ್ಯವಸ್ಥಿತ ಅಭ್ಯಾಸದಿಂದ ಕಂಡುಕೊಳ್ಳುತ್ತೇವೆ. ಇಲ್ಲಿ ಸಂಶೋಧಕ ಯಾವ ವಿಚಾರಕ್ಕೂ ತನ್ನದೇ ಕಡೆಯ ಮಾತು ಎಂಬ ಧೋರಣೆಯಿಟ್ಟುಕೊಂಡಿರಬಾರದು. ಅದರಲ್ಲಿ ಪರಿಶೀಲನಾ ದೃಷ್ಟಿ ಇರಬೇಕು. ಮುಂಬರುವ ಸಂಶೋಧಕರಿಗೆ ಇದು ದಾರಿ ತೋರಿಸುವಂತಿರಬೇಕು.

ಸಂಶೋಧನ ವಿನ್ಯಾಸವೆಂಬುದು ಮೊದಲಿಗೆ ತಾತ್ಕಾಲಿಕ ಸ್ವರೂಪದಲ್ಲಿದ್ದು ಸರಳವಾಗಿರುವುದು. ಆ ದಿಶೆಯಲ್ಲಿ ಪ್ರಯತ್ನಗಳು ನಡೆಯುತ್ತಾ ಬಂದಂತೆ ಅದಕ್ಕೆ ಒಂದು ಖಚಿತವಾದ ರೂಪ ಸಿಗುವುದು.

ಈ ರೀತಿಯ ವಿನ್ಯಾಸ ಮಾಡಿಕೊಳ್ಳುವುದರಿಂದ ಸಂಶೋಧನ ಕಾರ್ಯದಲ್ಲಿ ಬರುವ ತಪ್ಪುಗಳನ್ನು ತಿದ್ದಿಕೊಳ್ಳಲು ಸಹಾಯಕವಾಗುತ್ತದೆ. ಇಡೀ ಸಂಶೋಧನಾ ಕಾರ್ಯವು ಸಂಶೋಧಕನನ್ನು ಹತೋಟಿಯಲ್ಲಿಡಲು ಈ ಕ್ರಮದ ಅನುಸರಣೆ ಒಳ್ಳೆ

ಯದು. ಎಲ್ಲಕ್ಕಿಂತಲೂ ಮಿಗಿಲಾಗಿ ಹಣ, ಕಾಲ ಮತ್ತು ಶಕ್ತಿಗಳ ಅಪವ್ಯಯವನ್ನು ನಿಯಂತ್ರಿಸುತ್ತದೆ.

**3.3 ಸಂಶೋಧನ ವಿನ್ಯಾಸ ತಯಾರಿಸುವಾಗ ವಿನ್ಯಾಸಕಾರ ಗಮನಿಸಬೇಕಾದ ಅಂಶಗಳು :**

ಅ) ತಾನು ಆರಿಸಿಕೊಂಡ ವಿಷಯದ ಬಗೆಗೆ ಸ್ಪಷ್ಟ ಕಲ್ಪನೆ. ಅದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಸೂಕ್ತ ಪರಿಣತಿ.

ಆ) ತನ್ನ ವಿನ್ಯಾಸದ ರಚನೆಗೆ ಇತರ ಸಂಶೋಧನಾಕಾರರು, ವಿದ್ವಾಂಸರು, ತಯಾರಿಸಿದ ಸಂಶೋಧನ ವಿನ್ಯಾಸ ಎಷ್ಟರ ಮಟ್ಟಿಗೆ ಸಹಕಾರಿಯಾಗಿದೆ ಎಂಬ ವಿಷಯವನ್ನು ವಿವೇಚಿಸುವುದು.

ಇ) ಕಾಲ ಮತ್ತು ಹಣ ಬಹುಮುಖ್ಯವಾಗಿರುವುದರಿಂದ ಈ ದಿಶೆಯಲ್ಲಿ ಪ್ರಾಮಾಣಿಕ ರೀತಿಯ ನ್ಯಾಯ ನಿರ್ಣಯ ಅತ್ಯವಶ್ಯಕ.

ಈ) ಸಂಶೋಧನ ವೇಳೆಯಲ್ಲಿ ವಿನ್ಯಾಸವನ್ನು ಎರಡು ಬಾರಿ ಬದಲಾಯಿಸಬೇಕಾಗಬಹುದು. ಆದುದರಿಂದ ವಿನ್ಯಾಸಕಾರ ಒಂದು ಖಚಿತವಾದ ವಿನ್ಯಾಸವನ್ನು ಹಾಕಿಕೊಳ್ಳುವ ತಯಾರಿ ನಡೆಸಬೇಕು.

ಉ) ಸಂಶೋಧಕ ತನ್ನ ಮುಂದಿನ ಕ್ಷೇತ್ರಕಾರ್ಯಗಳಲ್ಲಿ, ವಿನ್ಯಾಸದಲ್ಲಿ ಹಾಕಿಕೊಂಡ ಕ್ರಮವನ್ನು ಚಾಚೂ ತಪ್ಪದಂತೆ ಪಾಲಿಸಬೇಕು.

ಊ) ಸಂಶೋಧಕ ಪೂರ್ಣವಾಗಿ ವರದಿ ತಯಾರಿಸಿದ ನಂತರ ವಿನ್ಯಾಸವನ್ನು ಅದಕ್ಕನುಗುಣವಾಗಿ ಮಾರ್ಪಾಟು ಮಾಡಿಕೊಳ್ಳಬಹುದು. ಮೂಲ ವಿನ್ಯಾಸವನ್ನು ಮಾರ್ಪಡಿಸುವಲ್ಲಿ ಎಚ್ಚರ ವಹಿಸಬೇಕು.

**3.4 ಸಂಶೋಧನ ವಿನ್ಯಾಸದ ಒಳಭಾಗ ಅಥವಾ ಸ್ವರೂಪ :**

1. ಮುನ್ನುಡಿ ಅಥವಾ ಪೀಠಿಕೆ : ಸಂಶೋಧನೆಯ ವಿಷಯ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ಮಾಹಿತಿಗಳನ್ನು ಇದು ಒಳಗೊಂಡಿರಬೇಕು. ಹೆಚ್ಚು ವಿಸ್ತಾರವಾಗಿರಬಾರದು.

2. ಸಮಸ್ಯೆಯ ಹೇಳಿಕೆ : ಆರಿಸಿಕೊಂಡ ಸಮಸ್ಯೆಯ ವಿವರಣೆ, ಆಯ್ಕೆಯ ಕಾರಣ, ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶಗಳ ನಿರೂಪಣೆ.

3. ಹಿಂದಿನವರು ಮಾಡಿದ ಪ್ರಯತ್ನಗಳ ನಿರೂಪಣೆ : ಸಂಶೋಧಕ ಆರಿಸಿಕೊಂಡ

ವಿಷಯದ ಮೇಲೆ ಅವನಿಗಿಂತ ಹಿಂದಿನವರು ಮಾಡಿದ ಪ್ರಯತ್ನಗಳ ನಿರೂಪಣೆ. ಅದರ ಆಧಾರದ ಮೇಲೆ ತಾನು ರೂಪಿಸಿಕೊಂಡ ಮಾರ್ಗ. ಹಾಗೆಯೇ ಹಿಂದಿನವರ ಪ್ರಯತ್ನದ ಬಗೆಗೆ ಸಂಶೋಧಕನ ಅಭಿಪ್ರಾಯ.

4. ಅಧ್ಯಯನದ ಉದ್ದೇಶ : ವಿಷಯದ ವಿಶ್ಲೇಷಣೆ, ವಿಷಯದ ವ್ಯಾಪ್ತಿ ಮತ್ತು ಚೌಕಟ್ಟುಗಳ ವಿವರಣೆ.

5. ಸೂತ್ರಗಳ ವಿವರಣೆ : ವಿಷಯಕ್ಕೆ ಸಂಬಂಧಿಸಿದಂತೆ ಸೂತ್ರಗಳು ಮತ್ತು ಅಭಿಪ್ರಾಯಗಳ ವಿವರಣೆ. ಸಮರ್ಪಕವಾದ ಸೂತ್ರಗಳು ಅಲಭ್ಯವಾದಲ್ಲಿ ಸಂಶೋಧಕ ತಾನೇ ಸ್ವಂತ ಅಭಿಪ್ರಾಯಗಳನ್ನು ನೀಡಬಹುದು.

6. ಪೂರ್ವಕಲ್ಪನೆ : ಅಧ್ಯಯನಕ್ಕೆ ಸಂಬಂಧಿಸಿದ ತನ್ನದೇ ಆದ ತೀರ್ಮಾನವನ್ನು ಸಂಶೋಧಕ ಕೈಗೊಳ್ಳಬೇಕು.

7. ಅಧ್ಯಯನದ ಮಿತಿ : ಒಂದು ಅಧ್ಯಯನಕ್ಕೆ ನಿಶ್ಚಿತ ಕಾಲ ಮತ್ತು ಹಣದ ಮಿತಿಯಿರುತ್ತದೆ. ಒಟ್ಟಿನಲ್ಲಿ ತನ್ನ ಅಧ್ಯಯನದ ಒಟ್ಟು ಮಿತಿಯನ್ನು ಕಂಡುಕೊಳ್ಳಬೇಕು.

8. ಅಭ್ಯಾಸಕ್ಕೆ ಅಳವಡಿಸಿಕೊಳ್ಳುವ ವಿಧಾನ ಮತ್ತು ತಂತ್ರ : ಸಂಶೋಧನೆಗೆ ಸಂಶೋಧಕನು ಅಳವಡಿಸಿಕೊಂಡ ವಿಧಾನ, ತಂತ್ರ, ರೀತಿ ಮತ್ತು ವಿಷಯ ಸಂಗ್ರಹ-ವಿಶ್ಲೇಷಣೆಗೆ ಬಳಸಿಕೊಂಡ ಉಪಕರಣಗಳು ಇತ್ಯಾದಿ ಇಲ್ಲಿ ಬರುತ್ತವೆ.

9. ತಗಲುವ ಖರ್ಚು (Budget) : ಇದು ಎಲ್ಲ ಸಂಶೋಧನೆಗೂ ಅಗತ್ಯವಿರುವುದಿಲ್ಲ. ಕೆಲವು ನಿರ್ದಿಷ್ಟ ಯೋಜನೆಯೊಳಗಿನ ಸಂಶೋಧನೆಗಳಿಗೆ ಮಾತ್ರ ಇದರ ಅಗತ್ಯವಿದೆ. ಇಲ್ಲಿ ಹಣದ ಖರ್ಚು (Cost Budget) ಮತ್ತು ಕಾಲದ ಬಳಕೆ (Time Budget) ಎಂಬ ವಿಭಾಗಗಳನ್ನು ಕಾಣಬಹುದು.

10. ಅಧ್ಯಾಯ ವಿಂಗಡಣೆ : ಅಧ್ಯಾಯಗಳ ಸಂಖ್ಯೆ ಮತ್ತು ಶೀರ್ಷಿಕೆಗಳನ್ನು ಕೊಡುವುದು. ಕೊನೆಯ ಅಧ್ಯಾಯ ಉಪಸಂಹಾರ (Conclussion) ದಲ್ಲಿ ಅನ್ವೇಷಣೆ ನಡೆದು ಬಂದ ರೀತಿ, ಸಲಹೆ, ಮುಕ್ತಾಯಗಳನ್ನು ಒಳಗೊಂಡಿರಬೇಕು.

ಸಂಶೋಧಕ ತನ್ನ ಹೇಳಿಕೆಗಳನ್ನು ಯಾವುದೇ ಸಂದಿಗ್ಧತೆಗಳಿಲ್ಲದೆ ನಿರೂಪಿಸಬೇಕಾದುದು ಅಗತ್ಯ. ಸಮಸ್ಯೆ ಎಷ್ಟೇ ಜಟಿಲವಾಗಿದ್ದರೂ ಅದನ್ನು ಹಾಗೆಯೇ ಬಿಡುವಂತಿಲ್ಲ. ಆದಕಾರಣ ರೂಪಿಸಿಕೊಂಡ ವಿನ್ಯಾಸದ ಬೆಂಬಲದ ಮೇಲೆ ಅಧ್ಯಯನಕ್ಕೆ ಒಂದು ರೀತಿಯ ಪರಿಪೂರ್ಣತ್ವ ಉಂಟಾಗುವುದು.

**3.5 ಟಿಪ್ಪಣಿ ಮಾಡಿಕೊಳ್ಳುವ ಕ್ರಮ :**

ಟಿಪ್ಪಣಿ ಮಾಡಿಕೊಳ್ಳಲು ಪೋಸ್ಟ್ ಕಾರ್ಡ್ ಆಕಾರದ ದಪ್ಪ ಹಾಳೆಗಳನ್ನು ಉಪಯೋಗಿಸಬಹುದು. ವಿಷಯ ವೈವಿಧ್ಯತೆಯನ್ನು, ಉದಾ : ಧರ್ಮ, ರಾಜಕೀಯ, ಇತಿಹಾಸ, ಸಾಹಿತ್ಯ, ಛಂದಸ್ಸು, ವರ್ಣನೆ, ಕವಿಗಳು ಇತ್ಯಾದಿ ಸುಲಭವಾಗಿ ಗುರುತಿಸಲು ಅನುಕೂಲವಾಗುವಂತೆ ಬಣ್ಣ ಬಣ್ಣದ ಕಾರ್ಡುಗಳನ್ನು ಬಳಸಿಕೊಳ್ಳಬಹುದು. ಒಂದೊಂದು ವಿಷಯಕ್ಕೆ ಒಂದೊಂದು ಬಣ್ಣದ ಕಾರ್ಡು ಎಂಬ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ವಿಷಯ ಸಂಗ್ರಹವಾದಂತೆಲ್ಲಾ ಅದನ್ನು ಕ್ರಮಬದ್ಧವಾಗಿ ಜೋಡಿಸಿಕೊಳ್ಳಲು ಈ ವಿಧಾನ ಸಹಕಾರಿಯಾಗುತ್ತದೆ. ಇದರಿಂದ ನಿಬಂಧ ರಚನೆಗೆ ಸುಲಭವೂ ಆಗುತ್ತದೆ. [ಕಾರ್ಡಿನಲ್ಲಿ ಗುರುತು ಮಾಡಿಕೊಳ್ಳುವ ವಿಧಾನಕ್ಕೆ ಅನುಬಂಧ ನೋಡಿ]

ಒಂದು ಆಕರದಿಂದ ಎಲ್ಲಾ ವಿಷಯಗಳನ್ನು ಬರೆದಿಟ್ಟುಕೊಳ್ಳಬೇಕಾಗಿಲ್ಲ. ಕೆಲವೊಮ್ಮೆ ಕೇವಲ ಮುಖ್ಯಾಂಶಗಳನ್ನಷ್ಟೇ ಬರೆದಿಟ್ಟುಕೊಳ್ಳಲೂಬಹುದು. ಅಭಿಪ್ರಾಯ ಸಾಮ್ಯ-ಹಾಗೂ ವೈಷಮ್ಯಗಳಿದ್ದಾಗ ಅದನ್ನು ಹಾಗೆಯೇ ಟಿಪ್ಪಣಿ ಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಟಿಪ್ಪಣಿ ಮಾಡುತ್ತಾ ಹೋದಂತೆ ಸಂಶೋಧಕನಿಗೆ ಸ್ವಂತ ಅಭಿಪ್ರಾಯಗಳು ಹೊಳೆಯಬಹುದು. ಇಂಥವನ್ನು ಅಲ್ಲೇ ಪ್ರತ್ಯೇಕವಾಗಿ ಬರೆದಿಟ್ಟುಕೊಂಡರೆ ನಿಬಂಧದಲ್ಲಿ ಬರೆಯುವಾಗ ತನ್ನ ಅಭಿಪ್ರಾಯವೆಂದು ಹೇಳಿಕೊಳ್ಳಬಹುದು. ಟಿಪ್ಪಣಿ ಮಾಡಿಕೊಳ್ಳುವಾಗ ಬರುವ ಅಭಿಪ್ರಾಯಗಳಿಗೂ ಬೆಲೆಯಿರುತ್ತದೆ. ಇದನ್ನು ಬರೆದಿಟ್ಟುಕೊಂಡರೆ ಮುಂದೆ ಸಕಾಲದಲ್ಲಿ ಮರೆತುಹೋಗಬಹುದಾದ ಅಪಾಯವನ್ನು ತಪ್ಪಿಸಿಕೊಂಡಂತೆಯೂ ಆಗುತ್ತದೆ. ಏನಿದ್ದರೂ ಸಂಶೋಧಕನು ತಾನು ಪಡೆದ ಋಣಾಂಶಗಳನ್ನು ಹೇಳದೆ ಇರಬಾರದು.

ಸಂಶೋಧಕನಿಗೆ ತನ್ನ ಸಂಶೋಧನೆಯ ಬಗೆಗೆ ಕಣ್ಣು, ಕಿವಿಗಳು ಸದಾ ತೆರೆದೇ ಇರುತ್ತದೆ. ಸಾಹಿತ್ಯ ಸಂಶೋಧಕನಿಗೆ ಪುಸ್ತಕಗಳೇ ಮುಖ್ಯ ಆಕರಗಳಾಗಿದ್ದರೂ ಬೇರೆ ಹಲವು ಮೂಲಗಳಿಂದಲೂ ಮಾಹಿತಿಗಳನ್ನು ಸಂಗ್ರಹಿಸಬಹುದು. ಸಾಹಿತಿಗಳ ಜೊತೆ ಮಾತುಗಾರಿಕೆ, ರೇಡಿಯೋ ಸಂದರ್ಶನಗಳು, ವಿಚಾರ ಸಂಕಿರಣಗಳು, ಮೊದಲಾದೆಡೆಗಳಲ್ಲೂ ಸಂಶೋಧನಾ ವಿಚಾರಗಳು ಸಿಗಬಹುದು. ಆದ ಕಾರಣ ಸಂಶೋಧಕ ತನ್ನ ಜೊತೆ ಕಾಗದ ಪೆನ್ನುಗಳನ್ನು ಸದಾ ಇಟ್ಟುಕೊಂಡಿರಬೇಕಾಗುತ್ತದೆ. ದೊಡ್ಡ ಸಾಹಿತಿಗಳೊಡನೆ ಮಾತುಕತೆ, ಸಂದರ್ಶನಗಳು ನಡೆಸುವಾಗಲೆಲ್ಲ ಆ ಬಗೆಗೆ ಮಾಹಿತಿ, ದಿನಾಂಕ-ವಿಚಾರ, ಮೊದಲಾದವುಗಳನ್ನು ಬರೆದಿಟ್ಟುಕೊಳ್ಳಬೇಕು. ಮಾರ್ಗದರ್ಶಿಯ ಜೊತೆ ಮಾತನಾಡುತ್ತಿರುವಂತೆ, ಚರ್ಚಿಸುತ್ತಿರುವಂತೆ ಹೊಸ ಹೊಸ ವಿಚಾರಗಳು ಹೊಳೆಯಬಹುದು. ಆಗಲೂ ಅವುಗಳನ್ನು ಟಿಪ್ಪಣಿ ಮಾಡಿಕೊಂಡಿರಬೇಕು.

ಸಾಹಿತ್ಯ ಸಂಶೋಧಕನಿಗೆ ಸಾಮಾನ್ಯವಾಗಿ ಗ್ರಂಥಾಲಯಗಳಿಂದಲೇ ಹೆಚ್ಚಿನ ಪ್ರಯೋಜನವಾಗುತ್ತದೆ. ಸಂಶೋಧಕ ವಿಷಯದ ಮೇಲೆ ವಿಷಯ ಸಂಗ್ರಹಣೆ ಮಾಡುತ್ತಾ ಹೋದಂತೆಲ್ಲಾ ಅದರ ಪ್ರಯೋಜನ ಗೊತ್ತಾಗುತ್ತದೆ. ಸಾಮಾನ್ಯವಾಗಿ ಸಾಹಿತ್ಯ ಚರಿತ್ರೆಗಳು, ಶಾಸನಗಳ ಅಧ್ಯಯನ. ವಿಶ್ವಕೋಶಗಳು, ಸಂಭಾವನಾ ಗ್ರಂಥಗಳು, ನಿಯತಕಾಲಿಕೆಗಳು, ಲೇಖನಗಳು, ಸಾಹಿತ್ಯ ವಾರ್ಷಿಕಗಳು, ವಿವರಣಾತ್ಮಕ ಸೂಚಿಗಳು, ನಿಬಂಧಗಳು, ಪತ್ರಿಕೆಗಳು-ಮೊದಲಾಗಿ ಏಕಕಾಲದಲ್ಲಿ ಒದಗಬಹುದಾದ ಜಾಗವೆಂದರೆ ಗ್ರಂಥಾಲಯವೇ ಆಗಿರುತ್ತದೆ. ಆದುದರಿಂದ ಗ್ರಂಥಾಲಯವು ಸಾಹಿತ್ಯ ಸಂಶೋಧಕನಿಗೆ ಮಹತ್ವದ ಜಾಗವೂ ಆಗುತ್ತದೆ.

ಸಾಮಾನ್ಯವಾಗಿ ಸಂಶೋಧನೆ (ಎಂ.ಫಿಲ್. ಅಥವಾ ಪಿಎಚ್.ಡಿ.) ಯು ಒಂದು ನಿರ್ದಿಷ್ಟ ಅವಧಿಯೊಳಗೆ ನಡೆಯಬೇಕಾಗಿರುವುದರಿಂದ ಗ್ರಂಥಾಲಯವನ್ನು ಸದುಪಯೋಗಪಡಿಸಿಕೊಳ್ಳುವಲ್ಲಿ ಹೆಚ್ಚಿನ ಎಚ್ಚರಿಕೆ ಅಗತ್ಯ. ಏಕೆಂದರೆ ಕಡಿಮೆ ಸಮಯದಲ್ಲಿ ಅತ್ಯಂತ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸುವ ಅಭ್ಯಾಸವನ್ನು ಸಂಶೋಧಕನು ಬೆಳೆಸಿಕೊಳ್ಳಬೇಕು. ಇದರಿಂದ ಹಲವು ಪ್ರಯೋಜನಗಳಿವೆ. ಉದಾಹರಣೆಗೆ ಒಂದು ಕೃತಿಯ ಅಧ್ಯಯನವನ್ನು ಅರ್ಧದಲ್ಲಿ ನಿಲ್ಲಿಸಿ ಬಂದಿದ್ದರೆ, ಮರುದಿನ ಗ್ರಂಥಾಲಯವನ್ನು ಹೊಕ್ಕಾಗ ಆ ಕೃತಿಯನ್ನು ಮತ್ತಾರಾದರೂ ಕೊಂಡು ಹೋಗಿ ತಮಗೆ ಸಿಕ್ಕದೇ ಹೋಗಬಹುದು. ಇಂಥಾ ಅವಾಂತರಗಳನ್ನು ತಪ್ಪಿಸಲು ಕ್ಷಿಪ್ರಗತಿಯ ಓದು ಹಾಗೂ ಬರವಣಿಗೆಗಳನ್ನು ರೂಢಿಸಿಕೊಳ್ಳುವುದು ಒಳ್ಳೆಯದು.

ಇತರ ವಿಧಾನಗಳು : ಮಾಹಿತಿ ಸಂಗ್ರಹಣೆಯು ಕೇವಲ ಗ್ರಂಥಾಲಯದಿಂದಷ್ಟೇ ಸಾಗುತ್ತದೆ ಎಂದು ತಿಳಿಯಬಾರದು. ಸಾಹಿತ್ಯ ಸಂಶೋಧನೆಯಲ್ಲಿ ಕೆಲವೊಮ್ಮೆ ವಿದ್ವಾಂಸರ ಮಾತುಗಳನ್ನು ಉಪಯೋಗಿಸಬಹುದು. ಉದಾಹರಣೆಗೆ ಅಪ್ರಕಟಿತ ಸಾಹಿತ್ಯ ರಚನೆಗಳ ಬಗೆಗೆ ಸಂಶೋಧನೆಗೆ ಹೊರಟಾಗ ಕೆಲವೊಮ್ಮೆ ವಿದ್ವಾಂಸರ ಅಭಿಪ್ರಾಯಗಳನ್ನೇ ಅಧಿಕೃತವಾಗಿ ತೆಗೆದುಕೊಳ್ಳಬೇಕಾಗಿ ಬರಬಹುದು. ಬೆಳಕಿಗೆ ಬಾರದೇ ಇದ್ದಿರಬಹುದಾದ ಕೆಲಮಂದಿ ಸಾಹಿತಿಗಳ ರಚನೆಗಳನ್ನು ಹುಡುಕ ಹೊರಟಾಗ ಇಂತಹ ಪರಿಸ್ಥಿತಿ ಎದುರಾಗಬಹುದು. ಆಗ ಆ ಕವಿಗಳ ಸಮಕಾಲೀನರಾದವರೋ ಅಥವಾ ಅಂಥವರ ಹತ್ತಿರದ ಸಂಬಂಧಿಕರನ್ನೋ ಸಂಪರ್ಕಿಸಿ ಮಾಹಿತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಆಧಾರ ಸಹಿತ ಮಾಹಿತಿಗಳು ಲಭ್ಯವಾಗದೇ ಹೋದಾಗಲೆಲ್ಲ ಇಂಥವೇ ಸಹಕಾರಿಗಳಾಗುತ್ತವೆ.

ಪ್ರಶ್ನೆ ಮಾಲಿಕೆ : ಕ್ಷೇತ್ರಕಾರ್ಯವೆಂದೂ ಇದನ್ನು ಪರಿಗಣಿಸಬಹುದು. ಸಂಶೋಧಕ ತನ್ನ ಸಂಶೋಧನ ಕ್ಷೇತ್ರದ ವ್ಯಾಪ್ತಿಯ ಬಗೆಗೆ ಪರಿಪೂರ್ಣವಾದ ಜ್ಞಾನ

ವನ್ನು ಹೊಂದಿರಬೇಕು. ಆತ ತನಗೆ ಬೇಕಾಗಿರುವ ಮಾಹಿತಿಗಳ ಬಗೆಗೆ ಪ್ರತ್ಯೇಕವಾಗಿ ಬರೆದಿಟ್ಟಿರಬೇಕು. ಅಗತ್ಯ ಬಿದ್ದೆಡೆಗಳಲ್ಲಿ ಯಾವ ಯಾವ ಪ್ರಶ್ನೆಗಳನ್ನು ಕೇಳಿ ಅದಕ್ಕೆ ಸಮರ್ಪಕವಾದ ಉತ್ತರಗಳು ಬೇಕಾಗಿವೆ ಎಂಬುದನ್ನು ಗುರುತು ಹಾಕಿಕೊಳ್ಳಬೇಕು. ಇದಕ್ಕೆ ಯೋಗ್ಯವಾದ ಪಶ್ನೆಮಾಲಿಕೆಯನ್ನು ತಯಾರಿಸಿಟ್ಟುಕೊಂಡಿರಬೇಕು, ಪ್ರಶ್ನೆ ಮಾಲಿಕೆಗಳನ್ನು ಸಂಬಂಧಪಟ್ಟವರಿಗೆ ಕೊಟ್ಟು ಆ ಮೂಲಕ ಉತ್ತರಗಳನ್ನು ಪಡೆದು ಮುಂದಿನ ಸಂಶೋಧನೆಗೆ ಅದನ್ನು ಬೇಕಾದಂತೆ ಉಪಯೋಗಿಸಿಕೊಳ್ಳಬೇಕು. ಪ್ರಶ್ನೆ ಗಳಿಗೆ ಉತ್ತರಗಳನ್ನು ಪಡೆಯುವಲ್ಲಿ ಯಾವುದೇ ಔದಾಸೀನ್ಯವನ್ನಾಗಲೀ ತೋರ ಬಾರದು. ಅಂತೆಯೇ ದಾಕ್ಷಿಣ್ಯವನ್ನೂ ಪಡಕೂಡದು. (ಮಾದರಿ ಪ್ರಶ್ನೆಮಾಲಿಕೆ ಗಳನ್ನು ಅನುಬಂಧದಲ್ಲಿ ನೋಡಬಹುದು.



# 4. ಪೂರ್ವ ಕಲ್ಪನೆ (HYPOTHESES)

## 4.1 ಮುನ್ನುಡಿ :

ಸಂಶೋಧನೆಯಲ್ಲಿ ಪೂರ್ವ ಕಲ್ಪನೆಗೂ ಬೆಲೆ ಇದೆ. ಇದಕ್ಕೆ ಸಂವಾದಿಯಾಗಿ ಊಹೆ/ಕಲ್ಪನೆ/ಆಧಾರ ಕಲ್ಪನೆ ಎಂಬ ಪದಗಳನ್ನು ಬಳಸಿಕೊಳ್ಳಬಹುದಾದರೂ ಇಲ್ಲಿ ಖಚಿತತೆಯ ದೃಷ್ಟಿಯಿಂದ ಪೂರ್ವಕಲ್ಪನೆ ಎಂಬ ಮಾತನ್ನೇ ಬಳಸಿಕೊಳ್ಳಲಾಗಿದೆ. ಮುಂದಿನ ವಿವರಣೆಗಳಲ್ಲಿ ಮೇಲಿನ ಯಾವ ಪದಗಳು ಬಂದರೂ ಅದನ್ನು ಬೇರೆ ಅರ್ಥ ದಲ್ಲಿ ನೋಡಬಾರದು. ಸಂಶೋಧನೆಯಲ್ಲಿ ಊಹೆ ಮಾತ್ರದಿಂದ ಏನನ್ನೂ ಸಾಧಿಸು ವಂತಿಲ್ಲ. ಸಾಹಿತ್ಯದಂತಹ ಅಮೂರ್ತ ವಿಚಾರಗಳ ಬಗೆಗೆ ಸಂಶೋಧನೆ ನಡೆಸಲು ಊಹೆ ಅತ್ಯಾವಶ್ಯಕ. ವಿಜ್ಞಾನದಲ್ಲಾದರೆ ಪ್ರಯೋಗ ಶಾಲೆಗಳ ಮೂಲಕ ಸಮಸ್ಯೆ ಗಳ ಪರಿಹಾರ ಸಾಧ್ಯ. ಸಾಹಿತ್ಯದಲ್ಲಾದರೆ ಕೇವಲ ಪುಸ್ತಕಗಳು, ಲಿಖಿತ ಆಧಾರಗಳು ಶಾಸನ, ಹಸ್ತಪ್ರತಿ, ಇವಿಷ್ಟೇ ಇರಬಹುದಾದಂತಹವು. ಕೆಲವೊಮ್ಮೆ ಊಹನೆಯೂ ಆಧಾರವಾಗಿಬಿಡುವ ಸಂಭವವಿದೆ. ಬೌದ್ಧಿಕವಾಗಿ ಆಳವಾದ ಚಿಂತನೆಯಿಂದ ಕೆಲ ವೊಮ್ಮೆ ಊಹೆಗಳಿಗೂ ಬೆಲೆ ಬರುವುದುಂಟು. ಕೆಲವೊಮ್ಮೆ ಕವಿಗಳ ಕಾಲನಿರ್ಣಯ ವಿಚಾರ ಇತ್ಯಾದಿ ಕೇವಲ ಊಹನೆಯಿಂದ ಸ್ಪಷ್ಟವಾಗುವುದಿದೆ. ಊಹನೆಗಳೂ ಕೆಲವೊಂದು ಆಧಾರಗಳಿಂದಲೇ ಹುಟ್ಟಿಕೊಂಡಂಥವುಗಳಾಗಿರುತ್ತವೆ. ಕೇವಲ ಊಹನೆ ಎಂದಷ್ಟೇ ತಿಳಿಯಬಾರದು. ಸಂಶೋಧನೆಯ ಪಥ ಹಾಗೂ ಪರಿಣಾಮಗಳನ್ನು ಕರಾರುವಾಕ್ಕಾಗಿ ಹೇಳಲು ಸಾಧ್ಯವಿಲ್ಲ. ಸಾಹಿತ್ಯದ ಬಗೆಗೆ ಸಂಶೋಧನೆಯನ್ನು ಸೂತ್ರ ಬದ್ಧವಾಗಿ ಮಾಡಲು ಮೊದಲು ಬರುವುದಿಲ್ಲ. ಇದಕ್ಕಾಗಿ ಸಂಶೋಧನೆಯ ಪೂರ್ವ ದಲ್ಲಿ ಕೆಲವೊಂದು ಕಲ್ಪನೆ ಅಥವಾ ಊಹನೆಗಳನ್ನು ಇಟ್ಟುಕೊಳ್ಳಬೇಕಾಗುತ್ತದೆ. ಇದನ್ನೇ ಪೂರ್ವ ಕಲ್ಪನೆ ಎನ್ನುತ್ತಾರೆ. ಪೂರ್ವ ಕಲ್ಪನೆಗಳಿಗೆ ಸಂಶೋಧನೆಯಲ್ಲಿ ಮಹತ್ವದಪಾತ್ರವಿರುತ್ತದೆ.

## 4.2 ಪೂರ್ವ ಕಲ್ಪನೆ – ಸಂಶೋಧನೆ :

ಸಾಕ್ಷ್ಯಾಧಾರ ಸಹಿತವಾದ ಸಿದ್ಧಾಂತ ಸತ್ಯದ ಕ್ರಮಬದ್ಧ ಮಂಡನೆಯೇ ಸಂಶೋ ಧನೆ. ನಿರ್ದಿಷ್ಟವಾದ ವಿಷಯದ ಮೇಲೆ ಸಂಶೋಧನೆ ನಡೆಸುವ ನಿರ್ಧಾರ ಮತ್ತು ಅದಕ್ಕೆ ಪೂರಕವಾಗಿ ಬರುವ ಅಂಶಗಳಿಂದ ಸಂಶೋಧನ ಮಾರ್ಗದಲ್ಲಿ ಯಶಸ್ವಿಯಾಗು ವುದು ಸಾಧ್ಯ. ಸಂಶೋಧನೆಯ ಆರಂಭದಲ್ಲಿ ಪೂರ್ವ ಕಲ್ಪನೆಯನ್ನು ಇಟ್ಟುಕೊಳ್ಳು

ವುದರಿಂದ ಸಂಶೋಧನೆಗೆ ಒಂದು ವ್ಯಾಪ್ತಿಯನ್ನು ಕಂಡುಕೊಳ್ಳುವುದಕ್ಕೆ ಸಹಾಯಕವಾಗುತ್ತದೆ. ಸಂಶೋಧನೆಯು ಮಿತಿಯಿಲ್ಲದ ವ್ಯಾಪ್ತಿಯನ್ನು ಹೊಂದಿರುವ ಕ್ಷೇತ್ರವಾದುದರಿಂದ ಹೀಗೆ ಪೂರ್ವ ನಿಯೋಜಿತ ಕಲ್ಪನೆಗಳಿಂದ ಅದರ ಆಳ ವಿಸ್ತಾರಗಳನ್ನು ಒಂದು ಪರಿಧಿಯೊಳಗೆ ಹಿಡಿದಿಟ್ಟಂತಾಗುವುದು. ಈ ನಿಟ್ಟಿನಿಂದ ಪೂರ್ವ ಕಲ್ಪನೆ ಅತ್ಯಗತ್ಯ.

ಸಂಶೋಧನೆಗಾಗಿ ಆಯ್ದುಕೊಂಡ ವಿಷಯದ ಬಗೆಗೆ ಕೆಲವಷ್ಟು ಮಾಹಿತಿಗಳನ್ನು ಸಂಗ್ರಹಿಸುತ್ತಿರುವಂತೆ ಈ ಪೂರ್ವ ಕಲ್ಪನೆಗಳ ಕೆಲಸ ಆರಂಭವಾಗುತ್ತದೆ. ಸಂಶೋಧನೆಯು ಮುಂದೆ ಯಾವ ದಾರಿಯಲ್ಲಿ ಸಾಗಬೇಕಾಗಿದೆ, ಇನ್ನೆಷ್ಟು ಮಾಹಿತಿ/ಆಧಾರಗಳನ್ನು ಸಂಗ್ರಹಿಸಬೇಕಾಗಿದೆ ಎಂಬಿತ್ಯಾದಿಗಳ ಸ್ಪಷ್ಟವಾದ ಅರಿವನ್ನು ಪೂರ್ವಕಲ್ಪನೆಗಳಿಂದ ಮಾಡಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಪೂರ್ವಕಲ್ಪನೆಗಳನ್ನು ಮಾಡಿಕೊಳ್ಳುವುದರಿಂದ ಸಂಶೋಧನೆಯ ದಾರಿಯು ಸುಗಮವಾಗುತ್ತದೆ. ಪೂರ್ವ ಕಲ್ಪನೆಗಳೇ ಸಂಶೋಧನೆಯಲ್ಲ. ಅವು ಸಂಶೋಧನೆಯ ದಾರಿದೀಪಗಳಾಗಬಹುದು. ಸಂಶೋಧಕನು ಇರಿಸಬೇಕಾಗಿರುವ ಹೆಜ್ಜೆಗಳನ್ನು ತೋರಿಸುವಂಥವುಗಳು ಅಷ್ಟೆ. ಯಾವುದೇ ಸಂಶೋಧನೆಯ ಆರಂಭದಲ್ಲಿ ದೊರಕಿದ ಮಾಹಿತಿಗಳ ಆಧಾರದ ಮೇಲೆ ಅಸ್ಪಷ್ಟವಾದ ಅಥವಾ ಕಾಲ್ಪನಿಕ ವಿಚಾರಗಳನ್ನು ಕಲೆ ಹಾಕಿಕೊಂಡು ಮುಂದೆ ಹೇಗೆ ಸಾಗಬಹುದು ಎಂಬಂತೆ ತಮಗೆ ತಾವೇ ಹಾಕಿಕೊಳ್ಳಬಹುದಾದ ಆರಂಭದ ಕಲ್ಪನೆಗಳು ಎಂದೂ ತಿಳಿಸಲಾಗಿದೆ. ಇದು ಸಂಶೋಧನೆಯ ಮೊದಲ ಹಂತ. ಆದುದರಿಂದಲೇ ಇದಕ್ಕೆ ಆ ಸ್ತರದಲ್ಲಿ ಅರ್ಥವಿರುತ್ತದೆ. ಸಂಶೋಧನೆ ಬೆಳೆಯುತ್ತಾ ಹೋದಂತೆಲ್ಲಾ ಅವು ಅರ್ಥವನ್ನು ಉಳಿಸಿಕೊಳ್ಳಬಹುದು ಅಥವಾ ಅಳಿಸಿಕೊಳ್ಳಲೂಬಹುದು. ಏನಿದ್ದರೂ ಆರಂಭದಲ್ಲಿ ಇವು ಮಹತ್ವದ ಪಾತ್ರಗಳನ್ನು ವಹಿಸುತ್ತವೆಂಬುದರಲ್ಲಿ ಸಂದೇಹವಿಲ್ಲ.

### 4.3 ಪೂರ್ವ ಕಲ್ಪನೆಗಳ ಉಪಯೋಗ :

ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವುದಕ್ಕೆ ಸಿದ್ಧಾಂತಗಳು ಸಹಾಯಕವಾಗುವ ಮುನ್ನ ಪೂರ್ವ ಕಲ್ಪನೆಗಳು ಸಹಾಯಕವಾಗುತ್ತದೆ. ಪೂರ್ವ ಕಲ್ಪನೆಗಳು ಕೆಲವೊಮ್ಮೆ ಸಮಸ್ಯೆಗಳನ್ನು ಪರಿಹಾರಮಾಡಲೂಬಹುದು ಅಥವಾ ಮುಂದಿನ ಹೆಜ್ಜೆಗಳನ್ನು ಕಂಡುಕೊಳ್ಳುವುದರಲ್ಲಿ ನೆರವಾಗಲೂಬಹುದು ಪೂರ್ವ ಕಲ್ಪನೆಗಳ ಉಪಯೋಗವನ್ನು ಹೀಗೆ ಹೇಳಬಹುದು.

ಅ) ಸಮಸ್ಯೆಗಳನ್ನು ಆಯ್ದುಕೊಳ್ಳುವಾಗ ಹಲವಾರು ದೃಷ್ಟಿಕೋನಗಳಿಂದ ವಿಶ್ಲೇಷಿಸುವುದಕ್ಕೆ ಸಹಕಾರಿಯಾಗುತ್ತದೆ.

ಆ) ವಿಷಯ ಸಂಗ್ರಹಣೆಯಲ್ಲಿ ಯಾವ ವಿಷಯ ಬೇಕಾದುದು ಹಾಗೂ ಬೇಡವಾದುದು ಎಂಬುದನ್ನು ಗುರುತಿಸಬಹುದು.

ಇ) ಪ್ರಶ್ನಿಸುವ ಮನೋಭಾವವನ್ನು ಉಂಟುಮಾಡುತ್ತದೆ.

ಈ) ಮೌಲ್ಯವತ್ತಾದ ಪ್ರಶ್ನೆಗಳಿಗೆ ಕಂಡುಕೊಳ್ಳುವ ಉತ್ತರಗಳೇ ಮೌಲ್ಯವತ್ತಾದ ಸಂಶೋಧನೆಯೂ ಆಗುತ್ತದೆ. ಇವಕ್ಕೆ ಸಹಕಾರಿ ಈ ಪೂರ್ವ ಕಲ್ಪನೆಗಳು.

ಉ) ಕ್ರಮಬದ್ಧವಾದ ಪೂರ್ವ ಕಲ್ಪನೆಗಳು ಸಂಶೋಧನೆಯಲ್ಲಿ ಮಹತ್ವದ ಪಾತ್ರ ವನ್ನು ವಹಿಸುತ್ತವೆ.

ಊ) ಸಂಶೋಧಕನ ಬುದ್ಧಿಶಕ್ತಿಯನ್ನು ಇನ್ನಷ್ಟು ಪ್ರಭಾವಶಾಲಿಯನ್ನಾಗಿಸುವುದಕ್ಕೆ ಪೂರ್ವ ಕಲ್ಪನೆಗಳಿಂದ ಸಾಧ್ಯ.

ಸಾಹಿತ್ಯ, ಜನಪದ ಮುಂತಾದ ವಿಚಾರಗಳ ಸಂಶೋಧನೆಯಲ್ಲಂತೂ ಪೂರ್ವ ಕಲ್ಪನೆಗಳೇ ಪ್ರಧಾನವಾದ ಮೆಟ್ಟಿಲುಗಳು. ಯಾವುದೇ ವಿಷಯವನ್ನು ಆಯ್ದು ಕೊಂಡಾಗ ಅದರ ಬಗೆಗೆ ಮೊದಲಾಗಿ ಏಳುವ ಪ್ರಶ್ನೆಗಳೇ ಪೂರ್ವ ಕಲ್ಪನೆಗಳಾಗುತ್ತವೆ. ಸಮಸ್ಯೆಗಳ ಕಲ್ಪನೆ, ಅವುಗಳಿಗೆ ಉತ್ತರಗಳನ್ನು ಕಂಡುಕೊಳ್ಳಬಹುದಾದ ರೀತಿಗಳನ್ನು ಆಲೋಚಿಸುವುದು, ವಿಷಯ ಸಂಗ್ರಹಣೆಯ ವಿಧಾನವನ್ನು ಸಂಯೋಜಿಸುವುದು ಮೊದ ಲಾದವುಗಳು ಮೊದಲ ಹಂತದ ಪೂರ್ವ ಕಲ್ಪನೆಗಳಾದೀತು. ಈವರೆಗೆ ಆಯಾ ಕ್ಷೇತ್ರ ಗಳಲ್ಲಿ ನಡೆದಿರುವ ಸಂಶೋಧನೆಗಳ ಬಗೆಗೆ ಮಾಹಿತಿಗಳನ್ನು ಸಂಗ್ರಹಿಸುವುದು, ಮುಂದಿನ ದಾರಿಯ ವಿವೇಚನೆ, ಮೊದಲಾದವುಗಳಲ್ಲಿ ಕೂಡಾ ಪೂರ್ವ ಕಲ್ಪನೆಗಳಿಂದ ಸಹಾಯ ವಾದೀತು.

## 4.4 ವಿಚಾರ – ವಿಮರ್ಶೆ :

ವಿಚಾರಗಳಾದರೆ ನಿಜಸ್ಥಿತಿಯ ಕುರಿತಾಗಿರುತ್ತದೆ. ಸತ್ಯವಾದುದು ವಿಚಾರ ವೆಂದೂ ಊಹನೆಯದ್ದು ಕಲ್ಪನೆಯೆಂದೂ ತಿಳಿಯಬೇಕು. ವಿಚಾರ ಅದು ಹೇಗೇ ಇರಲಿ, ಯಾವನೇ ಹೇಳಿರಲಿ ಅಥವಾ ಬರೆದಿರಲಿ ಅವುಗಳನ್ನು ಮೊದಲು ತನ್ನ ಮಟ್ಟ ದಲ್ಲಿ ಆಲೋಚಿಸಿ ಸ್ವೀಕರಿಸುವುದು ಸಂಶೋಧಕನ ಕರ್ತವ್ಯ. ಸಂಶೋಧಕ ಯಾವುದೇ ರೀತಿಯ ಪ್ರಲೋಭನೆಗಾಗಲೀ ದಾಕ್ಷಿಣ್ಯಕ್ಕಾಗಲೀ ಒಳಪಡುವಂತಿಲ್ಲ. ಆತ ನಿಸ್ಪೃಹ, ನಿರ್ಲಿಪ್ತ, ವಿಚಾರಕ್ಕೆ ತಕ್ಕಂತೆ ವೈಯುಕ್ತಿಕ ನಿರ್ಧಾರಗಳನ್ನು ತೆಗೆದು ಕೊಳ್ಳುವಂತಹ ಗಟ್ಟಿಯಾದ ವ್ಯಕ್ತಿತ್ವವನ್ನು ಹೊಂದಿರಬೇಕು.

ವಿಮರ್ಶೆಯೆಂದು ಈಗಾಗಲೇ ನಿರೂಪಿಸಿರುವಂತೆ ಯಾವುದೇ ವಿಚಾರವನ್ನು ಸ್ವೀಕರಿಸುವಲ್ಲಿ ವಿಮರ್ಶಿತ ದೃಷ್ಟಿಕೋಣವನ್ನಿರಿಸಿಕೊಂಡಿರಬೇಕು. ವಸ್ತುವಿನ ಆಯ್ಕೆಯಿಂದ ಹಿಡಿದು ವಿಷಯ ಸಂಗ್ರಹಣೆ, ನಿರೂಪಣೆ, ಸಂಶೋಧನಾ ಫಲವನ್ನು ಕೊಡುವಲ್ಲಿಯೂ ವಿಮರ್ಶಿತವಾದ ಧೋರಣೆಗಳನ್ನೇ ಮುಂದಿಟಬೇಕಾಗುತ್ತದೆ. ವಿಮರ್ಶಿತ ಧೋರಣೆಗಳನ್ನು ಹೊಂದಿದ್ದರೂ ಸಂಶೋಧಕ ವಿಮರ್ಶಕನಾಗಬಾರದು. ವಿಮರ್ಶೆಯಿಂದ ಸಂಶೋಧನೆಗೆ ಮಾರ್ಗ ತಪ್ಪುವಂತಾಗಬಾರದು.

ಊಹನೆ, ಕಲ್ಪನೆ, ವಿಚಾರ ಸಂಗ್ರಹಣೆ, ವಿಮರ್ಶೆ ನಿಷ್ಪಕ್ಷಪಾತ ಧೋರಣೆ, ಸತ್ಯದ ಅನುಸಂಧಾನದ ಮಾರ್ಗಗಳಾಗಿ ಸಂಶೋಧನೆಯನ್ನು ನಿರೂಪಿಸುತ್ತದೆ ಎನ್ನಬಹುದು.

# 5. ಪರಿಶೀಲನೆ / ಅವಲೋಕನ

## 5.1 ಮುನ್ನುಡಿ :

ಸಂಶೋಧನೆಯ ಮುಖ್ಯವಾದ ಭಾಗ ಪರಿಶೀಲನೆ, ಎಂದರೆ ಸಂಶೋಧಕ ತನ್ನ ವಿಷಯದ ಆಯ್ಕೆಯ ನಂತರ ಕೈಗೊಳ್ಳುವ ಮೊದಲ ಕಾರ್ಯ ಪರಿಶೀಲನೆ. ತನ್ನ ವಿಷಯದ ಪರಿಮಿತಿಯೊಳಗಿನ ಸಂಬಂಧಪಟ್ಟ ವಿಷಯಗಳನ್ನು ಕ್ರಮಬದ್ಧವಾಗಿ ಗಮನಿಸಿ ಹಿಡಿದಿಟ್ಟುಕೊಳ್ಳಲು ಸಂಶೋಧಕ ನಡೆಸುವ ಪ್ರಾಥಮಿಕ ಸಿದ್ಧತೆ ಎನ್ನಬಹುದು. ಕ್ಷೇತ್ರಕಾರ್ಯ, ಸಂದರ್ಶನ ಪ್ರಶ್ನೋತ್ತರ-ಇವುಗಳೆಲ್ಲಾ ಪರಿಶೀಲನೆಯ ವಲಯದಲ್ಲಿ ಬರುತ್ತವೆ.

ಪರಿಶೀಲನೆ ಎಂದರೆ ಪ್ರಜ್ಞಾ ಅವಯುವಗಳ ಮೂಲಕ ಗಳಿಸಿಕೊಳ್ಳುವ ಜ್ಞಾನ. ಕಣ್ಣು-ಕಿವಿಗಳನ್ನು ಆಧರಿಸಿ ಬಂದ ಮಾತುಗಳನ್ನು ಉಪಯೋಗಿಸಿ ತಿಳಿದುಕೊಳ್ಳುವ ವಿಧಾನ. ಇದೇ ಅರ್ಥ ಬರುವಂತೆ ತಮಿಳಿನ ಪ್ರಾಚೀನ ವ್ಯಾಕರಣ ಗ್ರಂಥವಾದ ತೊಲ್ಕಾಪ್ಪಿಯಂನ ಪೊರುಳಧಿಕಾರದಲ್ಲಿ ಬರುವ "ಕಣ್ಣಿನುಂಇ ಚೆವಿಯಿನುಮ್ ತಿಣ್ಣಿದಿನ್ ಉಣರುಮ್ ಉಣರ್ವು" ಎಂಬುದು ಯಾವುದೇ ಕ್ಷೇತ್ರದಲ್ಲಾದರೂ ಕಣ್ಣು-ಕಿವಿ-ಬಾಯಿಗಳು ಬಹುಮುಖ್ಯ ಎಂಬ ಅಂಶವನ್ನು ಸಾಬೀತುಪಡಿಸುತ್ತದೆ.

'Observation' ಪದಕ್ಕೆ Oxford Concise Dictionary ಯಲ್ಲಿ ಈ ವಿವರಣೆ ಕೊಡಲಾಗಿದೆ. "The observation is accurate watching and noting of Phenominan as they occur in nature in which regard to cause and effect or mutual relations" ಎಂದಿದೆ. P.V. Young ಎಂಬ ವಿದ್ವಾಂಸ ತನ್ನ Social and Scientific Research Methods ಎಂಬ ಪುಸ್ತಕದಲ್ಲಿ "The observation is a systamatic and deliberate study through the eye of spontaneous occurences at the time they occur" ಎಂದಿದ್ದಾನೆ.

ಕೆಲವು ವಿಚಾರಗಳನ್ನು ಕೇಳಿದರೆ ಅಥವಾ ಓದಿದರೆ ಮಾತ್ರ ಸಾಲದು. ಸ್ವತಃ ಅನುಭವದಿಂದ ಕಂಡುಕೊಳ್ಳಬೇಕಾಗುವುದು. ಹಾಗೆಯೇ ಮತ್ತೆ ಕೆಲವು ವಿಷಯ

ಗಳನ್ನು ಸಂಗ್ರಹಿಸಲು ಆ ಕ್ಷೇತ್ರಕ್ಕೇ ಹೋಗಬೇಕಾಗುತ್ತದೆ. ಉದಾ : ಶಾಸನಗಳನ್ನು ನೋಡಲು ಹೋಗುವುದು, ಒಬ್ಬ ವ್ಯಕ್ತಿಯನ್ನು ಭೇಟಿ ಮಾಡುವುದು ಇತ್ಯಾದಿ. ಇಲ್ಲಿ ವ್ಯಕ್ತಿಗೂ, ವಸ್ತುವಿಗೂ ನಡುವಿನ ಅಂತರ ಹಾಗೂ ಸಂಬಂಧಗಳು ತಿಳಿದುಬರುವುವು. ಒಂದರ ಕೊರತೆಯನ್ನು ಮತ್ತೊಂದರಲ್ಲಿ ಪರಿಹರಿಸಿಕೊಳ್ಳಲು ಪರಿಶೀಲನೆ ಅತಿ ಮುಖ್ಯವಾದುದು.

## 5.2 ಉಪಯೋಗಗಳು :

ಸಂಶೋಧನೆಯಲ್ಲಿ ಸ್ಪಷ್ಟವಾದ ಅಭಿಪ್ರಾಯ ಕೊಡಲು ಹಾಗೂ ನಿರ್ದಿಷ್ಟ ಸ್ವರೂಪ ರೂಪಿಸಲು ಪರಿಶೀಲನೆ ಸಹಾಯಕಾರಿ. ಸಂಶೋಧನೆಯ ವ್ಯವಸ್ಥಿತ ಬರವಣಿಗೆಗೆ ಇದು ಪೂರಕವಾಗಿರುವುದು. ಒಂದು ವಿಷಯದ ಪ್ರಕಟಣೆಯನ್ನು ಸಾಧಾರವಾಗಿ ನಿರೂಪಿಸುವಲ್ಲಿ ಪರಿಶೀಲನೆಯ ಪಾತ್ರ ಮಹತ್ವದ್ದಾಗಿರುತ್ತದೆ. ಸಂಶೋಧಕನ ಪೂರ್ವ ಕಲ್ಪನೆಯ ರಚನೆಯಲ್ಲಿಯೂ ಪರಿಶೀಲನೆ ಅಗತ್ಯವಾದುದು. ವಿಷಯದ ಆಳವಾದ ಅಭ್ಯಾಸಕ್ಕೆ ಪರಿಶೀಲನೆ ಅವಶ್ಯಕವಾದುದು. ಪ್ರಾಥಮಿಕವಾಗಿ, ಸಂಶೋಧನೆಯೆಂದರೆ ಮಾನವನ ಬೌದ್ಧಿಕವಾದ ನಿಲುವನ್ನು ಪರಿಶೀಲಿಸಿ, ಅದರ ಮೂಲಕ ಅನುಭವ ಪ್ರಜ್ಞೆಯನ್ನು ತಿಳಿದುಕೊಳ್ಳುವುದು. "ಪ್ರಜ್ಞಾವಂತ ದೃಷ್ಟಿಯಿಂದ ಆಯ್ದ ಕ್ಷೇತ್ರದಲ್ಲಿ ತೀಕ್ಷ್ಣವಾಗಿ ನಡೆಸುವ ಪರಿಶೀಲನೆಯೇ ಅರ್ಥಯುಕ್ತವಾದುದು" ಎನ್ನಬಹುದು. ನೇರವಾಗಿ ಹೋಗಿ ವಸ್ತು ಸ್ಥಿತಿಯನ್ನು ಅರಿಯುವುದರಿಂದ ಅದು ಹೆಚ್ಚು ಉತ್ತಮವಾದುದು.

## 5.3 ವಿಭಾಗಗಳು :

ಪರಿಶೀಲನೆಯಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳನ್ನು ಗುರುತಿಸಬಹುದು,

ಅ) ಇಂದ್ರಿಯಜ್ಞಾನ : (Sense perception)
ಪಂಚೇಂದ್ರಿಯಗಳಿಂದ ಸಿದ್ಧಿಸುವಂತಹುದು, ನಂಬಲರ್ಹವಾದ ವಿಷಯವನ್ನು ಸಾದರಪಡಿಸಿಕೊಳ್ಳಲು, ಸ್ವತಃ ತಿಳಿಯಲು ಈ ಪಂಚೇಂದ್ರಿಯಗಳ ಸಹಾಯ ಪರಿಶೀಲನಕಾರನಿಗೆ ಬೇಕಾಗುತ್ತದೆ.

ಆ) ಗಮನ : (Attention)
ಸಂಬಂಧಿಸಿದ ಕ್ಷೇತ್ರದ ಗತಿಯನ್ನು ತಿಳಿಯುವುದು. ಆರಿಸಿಕೊಂಡ ವಿಷಯದಲ್ಲೇ ಗಮನವಿರಿಸುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

ಇ) ಗ್ರಹಿಕೆ : (Perception)
ಪ್ರಜ್ಞಾದಾಖಲೆಗಳ ಅರ್ಥಸ್ಪಷ್ಟನೆ ಮಾಡುವುದು. ಇದು ಪ್ರಜ್ಞಾತ್ಮಕ ಮತ್ತು ಊಹಾತ್ಮಕ ಮೂಲವಸ್ತುಗಳ ಸಂಕೀರ್ಣವಾಗುತ್ತದೆ.

ವೈಜ್ಞಾನಿಕವಾಗಿ ಪರಿಶೀಲನೆಯನ್ನು ಮೂರು ವಿಂಗಡಣೆಗಳನ್ನಾಗಿ ಮಾಡಬಹುದು.

(i) ವೈಯುಕ್ತಿಕ ಮತ್ತು ಅವೈಯುಕ್ತಿಕ
(Participent and Non-participent)

(ii) ನಿಯಮಿತ ಮತ್ತು ನಿಯಮ ರಹಿತ
(Controlled and Uncontrolled)

(iii) ರಚಿತ ಮತ್ತು ಅರಚಿತ
(Structured and Unstructured)

ಪರಿಶೀಲನೆ ಒಂದು ರೀತಿಯ ಶಾಸ್ತ್ರೀಯ ವ್ಯವಸ್ಥಿತ ಪದ್ಧತಿ. ಇದು ಶಾರೀರಕವೂ, ಮಾನಸಿಕವೂ ಆದ ಕ್ರಿಯೆ. ವ್ಯವಸ್ಥಿತ ಪರಿಶೀಲನೆಯಲ್ಲಿ ಪ್ರಜ್ಞಾಸಹನ ಶಕ್ತಿ ಇರುತ್ತದೆ,

## 5.4 ಪರಿಶೀಲನೆಯ ತಂತ್ರ :

ಯಾವುದೇ ಕ್ಷೇತ್ರಗಳಲ್ಲಿ ಪರಿಶೀಲನೆ ನಡೆಸುವಾಗ ಈ ಸಂಗತಿಗಳನ್ನು ಗಮನಿಸಬೇಕು.

ಅ) ಯಾವುದನ್ನು ಪರಿಶೀಲಿಸಬೇಕು.

ಆ) ಕೆಲಸವನ್ನು ಹೇಗೆ ಪ್ರಾರಂಭಿಸಬೇಕು.

ಇ) ಪರಿಶೀಲನೆಯಲ್ಲಿ ಉಪಯೋಗಿಸುವ ಪರಿಕರಗಳು ಯಾವುವು.

ಈ) ದಾಖಲಿಸುವ ಬಗೆ ಹೇಗೆ.

ಉ) ವಿಷಯದ ಅರ್ಥಸ್ಪಷ್ಟತೆ ನೀಡುವುದು ಹೇಗೆ.

ಊ) ಸಂಬಂಧಪಟ್ಟ ವಿಷಯಕ್ಕೂ, ಪರಿಶೀಲಿಸುವ ವ್ಯಕ್ತಿಗೂ ಇರುವ ಸಂಬಂಧ.

ಋ) ಸಂಬಂಧದ ಮೂಲ ಹೇಗೆ ಉಂಟಾಯಿತು ? ಹೇಗೆ ಬೆಳೆದುಕೊಂಡು ಬಂದಿದೆ.

ಈ ಎಲ್ಲ ಅಂಶಗಳಿಗೆ ಸಮರ್ಥವಾದ ಉತ್ತರ ದೊರಕುವಂತಿರಬೇಕು. ಪಡೆದುಕೊಳ್ಳಲು ಪ್ರಾಮಾಣಿಕ ಪ್ರಯತ್ನ, ಹಾಗೂ ಶ್ರಮ ಎರಡೂ ಇರಬೇಕು.

## 5.5 ಪರಿಶೀಲನೆಯ ಪೂರ್ವಯೋಜನೆಯ ಸಂದರ್ಭದಲ್ಲಿ ಗಮನಿಸಬೇಕಾದ ಅಂಶಗಳು :

1. ಪರಿಶೀಲನೆ ನಡೆಸುವವನು - ಅದರ ಹಿನ್ನೆಲೆ, ತತ್ವ, ವಿಷಯ ವ್ಯಾಪ್ತಿಯನ್ನು ಸ್ಪಷ್ಟವಾಗಿ ತಳಹದಿಯೆಂಬಂತೆ ಅರಿತಿರಬೇಕು.

2. ಜಾಗರೂಕವಾಗಿ ಪರಿಶೀಲಿಸಿ ದಾಖಲು ಮಾಡಿದ್ದನ್ನು ಆಯ್ಕೆ ಮಾಡಿ, ಮೌಲ್ಯಯುಕ್ತವಾಗಿ ನಿರ್ಧರಿಸಬೇಕು.
3. ಪರಿಶೀಲಿಸುವ ವಿಷಯುಗಳ ಪ್ರತಿಯೊಂದು ಘಟಕಗಳ ಗಾತ್ರವನ್ನು ನಿಶ್ಚಯಿಸಬೇಕು. ತಂತ್ರಗಳ ಬಗ್ಗೆ ಗಮನವಿರಬೇಕು.
4. ಪರಿಶೀಲನೆಯ ಕಾಲಮಿತಿ : ಪ್ರತಿಯೊಂದು ಕಾಲಮಿತಿಗಳಲ್ಲಿ ನಿಶ್ಚಿತವಾಗಿ ಅರಿತುಕೊಳ್ಳಲಿರುವ ಅಂಶಗಳ ಪೂರ್ವ ತಯಾರಿ ಮೊದಲೇ ಸಿದ್ಧವಾಗಿರಬೇಕು.
5. ಸಹಾಯಕರ ಸಂಖ್ಯೆ : ಪರಿಶೀಲನೆ ಒಬ್ಬನೇ ನಡೆಸಬಹುದೇ ? ಇಲ್ಲವೇ ಗುಂಪಾಗಿಯೇ ? ಎಂಬುದರ ನಿರ್ಧಾರ. ಗುಂಪಾಗಿ ಹೋಗುವುದು ವಿಷಯ ಸಂಗ್ರಹಣೆಯ ದೃಷ್ಟಿಯಿಂದ ವಿಷಯ ವ್ಯಾಪ್ತಿಯ ರೀತಿಯಿಂದ ಒಳ್ಳೆಯದು.
6. ಸಹಾಯಕರಿಗೆ ನೀಡಬೇಕಾದ ತರಬೇತಿಯ ಪಟ್ಟಿಯನ್ನು ಸಿದ್ಧಗೊಳಿಸುವುದು.
7. ನಿಜವಾದ ಪರಿಶೀಲನೆಗೆ ಮುನ್ನ ಒಂದು ಪೂರ್ವರೂಪದ ಪರಿಶೀಲನೆ ನಡೆಸಬಹುದು.
8. ಅಗತ್ಯವಿರುವ ಎಲ್ಲ ವಿಷಯುಗಳನ್ನೂ ಬರೆದಿಟ್ಟುಕೊಳ್ಳಬೇಕು. ಟಿಪ್ಪಣಿ ಬರೆಯುವ ಕ್ರಮ ಅರಿತಿರಬೇಕು. ಬರವಣಿಗೆಯಲ್ಲಿ ಸಾಂಕೇತಿಕ ಅಕ್ಷರ ಬಳಸಿ, ಬೇಗ ಬೇಗ ಬರೆದುಕೊಂಡು ಆಮೇಲೆ ವಿಸ್ತರಿಸಬಹುದು. ಧ್ವನಿ ಮುದ್ರಣ ಸಾಧನವನ್ನು (Tape recorder) ಬಳಸಬಹುದು.
9. ಮಾಹಿತಿದಾರನನ್ನು ವಿಷಯ ಸಂಗ್ರಹಣ ಕಾಲದಲ್ಲಿ ಯಾವಕಾರಣಕ್ಕೂ ನಿಂದಿಸುವುದಾಗಲಿ, ಅಪಹಾಸ್ಯವಾಗಲೀ ಮಾಡಕೂಡದು.
10. ಮಾಹಿತಿದಾರರೊಂದಿಗಿರುವಾಗ ಸಂಪೂರ್ಣ ಆಸಕ್ತಿ ಇರುವವರಂತೆ ನಡೆದುಕೊಳ್ಳಬೇಕು. ಆಮೇಲೆ ಸಂಗ್ರಹಿತ ವಿಷಯಗಳನ್ನು ತನ್ನ ವ್ಯಾಸಂಗಕ್ಕೆ ತಕ್ಕಂತೆ ಜೋಡಿಸಿಟ್ಟುಕೊಳ್ಳಬಹುದು. ಅಗತ್ಯವಿಲ್ಲದ್ದನ್ನು ಬಿಟ್ಟುಬಿಡಬಹುದು.

ಈ ರೀತಿಯಲ್ಲಿ ತನ್ನ ಸುತ್ತ ಮುತ್ತಲಿನ ಪರಿಸರದ ವಿಷಯುಗಳನ್ನು ಹಿಡಿದಿಟ್ಟುಕೊಳ್ಳುವಾಗ ಸಂಶೋಧಕ, ಪರಿಶೀಲನೆಯಂತಹ ವಿಧಾನಗಳನ್ನು ಕೈಗೊಳ್ಳುವುದರಿಂದ, ಆತನ ಸಂಶೋಧನೆಗೆ ಒಂದು ಖಚಿತವಾದ, ವ್ಯವಸ್ಥಿತವಾದ ರೂಪ ಹಾಗೂ ಸಮಗ್ರತೆ ದೊರಕುವುದು. ಹೀಗೆ ಪರಿಶೀಲನೆ ಸಂಶೋಧನ ಶಾಸ್ತ್ರದ ಒಂದು ಮಹತ್ವದ ಅಂಗವಾಗಿ ಪರಿಣಮಿಸಿದೆ.

# 6. ಪ್ರಶ್ನೆಮಾಲಿಕೆ

## 6.1 ಮುನ್ನುಡಿ :

ದೈನಂದಿನ ಜೀವನವು ಏನು ? ಏಕೆ ? ಹೇಗೆ ? ಎಲ್ಲಿ ? ಎಂಬ ಪ್ರಶ್ನೆಗಳ ಮುಖಾಂತರವೇ ಸಾಗುತ್ತಾ ಬಂದಿದೆ. ಹಾಗೆ ನೋಡಿದರೆ ನಾವು ಇಂದು ಕಾಣುತ್ತಿರುವ ಪ್ರತಿಯೊಂದು ಬೆಳವಣಿಗೆ, ವಿವರಣೆಯ ಹಿನ್ನೆಲೆಯಲ್ಲಿ ಕೌತುಕಮಯವಾದ ಸಮಸ್ಯೆಗಳು ಇದ್ದಿರಲೇಬೇಕು. ಈ ಕಾರಣದಿಂದ ಜಟಿಲವಾದ ಎಷ್ಟೋ ಸಂಗತಿಗಳನ್ನು ಅರ್ಥೈಸಿಕೊಳ್ಳಲು ನಾವು ನಮ್ಮಷ್ಟಕ್ಕೇ ನಮಗರಿವಿಲ್ಲದಂತೆಯೇ ಸಮಸ್ಯೆಗಳನ್ನು ರೂಪಿಸಿಕೊಂಡು, ಅದಕ್ಕೆ ಉತ್ತರವಾಗಿ ಅರ್ಥಗಳನ್ನು ಬಿಡಿಸಿಕೊಳ್ಳುತ್ತಾ ಬಂದಿದ್ದೇವೆ. ಇದು ನಿಜ ಜೀವನದ ರೀತಿ. ಸಾಹಿತ್ಯ ಲೋಕಕ್ಕೆ ಬಂದಾಗ ಸಂಶೋಧನೆಯಲ್ಲಿ ಪ್ರಶ್ನೆಗಳು ಮುಖ್ಯ ಪಾತ್ರವನ್ನು ವಹಿಸುತ್ತವೆ. ತಾತ್ವಿಕವಾಗಿ ಹೇಳುವುದಾದರೆ ಸಂಶೋಧನೆ ಎಂದರೆ ಪ್ರಶ್ನೆಗಳ ಸಮೂಹಕ್ಕೆ ಕಂಡುಕೊಳ್ಳುವ ಉತ್ತರಗಳ ಕ್ರಮಬದ್ಧ ಜೋಡಣೆ ಎಂದು ಹೇಳಬಹುದು. ಯಾವುದೇ ವಿಷಯದ ಬಗೆಗೆ ಮಾಹಿತಿ ಸಂಗ್ರಹಿಸಬೇಕಾಗಿ ಬಂದಾಗ ಪ್ರಶ್ನೆಗಳು ಅತಿಮುಖ್ಯ ಪಾತ್ರ ವಹಿಸುತ್ತವೆ, ಹಾಕಿಕೊಂಡ ಪ್ರಶ್ನೆಗಳಿಗೆ ಒದಗುವ ಉತ್ತರಗಳೂ ಮುಖ್ಯವಾದವುಗಳು. ಸಾಮಾನ್ಯವಾಗಿ ಸಂಶೋಧನೆ ಮೊದಲು ಹಾಕಿಕೊಳ್ಳುವ ಪ್ರಶ್ನೆಗಳಲ್ಲಿ "ಏನು, ಏಕೆ, ಹೇಗೆ" ಎಂಬುವು ಮುಖ್ಯವಾಗುತ್ತವೆ. ಪ್ರಶ್ನೆಗಳು ನಿರಂತರ ಹುಟ್ಟಿಕೊಳ್ಳುತ್ತವೆಯೆಂದರೆ ಸಂಶೋಧನೆಗೆ ಅವಕಾಶ ಜಾಸ್ತಿಯಾಗುತ್ತದೆ. ಅಥವಾ ಪ್ರಶ್ನೆಗಳು ಹುಟ್ಟಿಕೊಳ್ಳಲು ಆರಂಭವಾಗಿವೆಯೆಂದರೆ ಸಂಶೋಧನಾ ಪ್ರವೃತ್ತಿಯೂ ಹುಟ್ಟಿಕೊಂಡಿದೆಯೆಂದು ತಾತ್ವಿಕವಾಗಿ ಹೇಳಬಹುದು. ಒಟ್ಟಿನಲ್ಲಿ ಸಮಸ್ಯೆಗಳು ಸಂಶೋಧನಾ ಲೋಕಕ್ಕೆ ಕೀಲಿಕೈ ಇದ್ದಂತೆ.

## 6.2 ಪ್ರಶ್ನೆಗಳ ವೈವಿಧ್ಯ :

ಸಾಹಿತ್ಯ ಸಂಶೋಧಕ ತನ್ನ ಕಾರ್ಯದಲ್ಲಿ ಸದಾ ಎಚ್ಚರದಿಂದಿರಬೇಕಾಗುತ್ತದೆ. ಯಾವುದೇ ಕ್ಷೇತ್ರದಲ್ಲಿ, ವೇಳೆಯಲ್ಲಿ ಆಲಸಿಯಾಗಿಯೋ, ಹಗುರವಾಗಿಯೋ ನಡೆದುಕೊಳ್ಳಬಾರದು. ಇಲ್ಲಿ ಸಂಶೋಧಕ ಪ್ರಶ್ನೆಗಳಿಗಾಗಿ ಪ್ರಶ್ನೆಗಳು ಎಂದು ಭಾವಿಸದೆ ಸಂದರ್ಭಕ್ಕೆ ತಕ್ಕಂತಹ ವಿಷಯ ಸ್ಫುರಣೆಗೆ ಅನುಕೂಲವಾಗುವಂಥ ಪ್ರಶ್ನೆಗಳನ್ನು ಹೆಣೆದಿಟ್ಟುಕೊಂಡು, ಅವಶ್ಯಕತೆ ಬಿದ್ದಾಗ ಅವುಗಳ ಉಪಯೋಗವನ್ನು ಸಮರ್ಥ ರೀತಿಯಲ್ಲಿ ಮಾಡಬೇಕಾಗುತ್ತದೆ.

ಸಂಶೋಧನಾ ವಿಷಯದ ಆಯ್ಕೆಯ ಅನಂತರ ಸಂಶೋಧಕ ನಿರಂತರವಾಗಿ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಲೇ ಇರುತ್ತಾನೆ. ಹಾಗೆ ಹಾಕಿಕೊಂಡ ಪ್ರಶ್ನೆಗಳಿಗೆಲ್ಲಾ ಸಮರ್ಪಕವಾದ ಉತ್ತರಗಳನ್ನು ಪಡೆಯಲು ಆರಂಭಿಸುತ್ತಾನೆ. ಕ್ಷೇತ್ರಕಾರ್ಯದಲ್ಲಾಗಲೀ, ಮಾಹಿತಿಕಾರರಿಗಾಗಲೀ ಪ್ರಶ್ನೆಗಳನ್ನು ಹಾಕಿ ಉತ್ತರಗಳನ್ನು ಕಂಡುಕೊಳ್ಳುವಾಗ ಸಂಶೋಧಕ ಎಚ್ಚರಿಕೆ ವಹಿಸಿರಬೇಕು. ಮಾಹಿತಿಕಾರರ ಬೌದ್ಧಿಕ ಮಟ್ಟಕ್ಕೆ ಅನುಗುಣವಾದ ಪ್ರಶ್ನೆಗಳನ್ನು ಹಾಕಬೇಕು. ಅವರ ಭಾಷೆ, ಆಚಾರ, ನುಡಿಗಳನ್ನು ಅಧ್ಯಯನ ನಡೆಸುವುದರೊಂದಿಗೆ ಅವರಿಂದ ಸಮರ್ಪಕವಾದ ರೀತಿಯಲ್ಲಿ ಉತ್ತರ ಲಭ್ಯವಾಗುವಂತಹ ಪ್ರಶ್ನೆಗಳನ್ನು ಹಾಕಿಕೊಳ್ಳಬೇಕು ಇಲ್ಲದಿದ್ದರೆ ಸಂಶೋಧಕನ ಕೆಲಸವು ಸಮರ್ಪಕವಾಗಿ ಕೈಗೂಡಲಾರದು.

ಇಂಥಾ ಸಂದರ್ಭಗಳಲ್ಲಿ ಪ್ರಶ್ನೆಮಾಲಿಕೆಗಳನ್ನು ಮೊದಲೇ ಮಾಡಿಟ್ಟುಕೊಳ್ಳಬೇಕು. ಪ್ರಶ್ನೆಗಳು ಸರಳವಾಗಿರಬೇಕು. ಪ್ರಶ್ನೆಗಳು ಸುಲಭವಾಗಿ ಅರ್ಥವಾಗುವಂತಿರಬೇಕು. ಇವಕ್ಕೆ ಲಿಖಿತವಾದ ಉತ್ತರಗಳನ್ನು ಪಡೆಯಬಹುದಾದಲ್ಲಿ ಅಂತಹ ಕಡೆಗಳಲ್ಲಿ ಹಾಳೆಗಳನ್ನು ಸಂಶೋಧಕನೇ ಒದಗಿಸುವುದು ಒಳ್ಳೆಯದು. ಧ್ವನಿಮುದ್ರಣಗಳನ್ನೂ ಮಾಡಿಕೊಳ್ಳಬಹುದು. ಗೊಂದಲಕ್ಕೆಡೆಮಾಡುವಂಥಾ ಪ್ರಶ್ನೆಗಳನ್ನು ಹಾಕಬಾರದು. ಏನಿದ್ದರೂ ಪ್ರಶ್ನೆಗಳಿಗೆ ಉತ್ತರ ಸಿಗಬೇಕಾಗಿರುವುದೇ ಮುಖ್ಯ ಎನ್ನುವ ತತ್ವ ಸಂಶೋಧಕನಲ್ಲಿರಬೇಕು.

ವಿದ್ವಾಂಸರಿಂದ ಪಡೆಯಬಹುದಾದ ಉತ್ತರಗಳನ್ನು ಸಂಬಂಧಪಟ್ಟವರಿಗೆ ಸಕಾಲದಲ್ಲೇ ಕಳಿಸಿ ಪಡೆಯಬಹುದು. ಸಂಶೋಧನೆಯ ಕೆಲಸದಲ್ಲಿ ಯಾವುದೇ ರೀತಿಯ ಪ್ರತಿಷ್ಠೆ, ಗೌರವ, ಅಂತಸ್ತು ಮೊದಲಾದ ಪ್ರಜ್ಞೆಗಳು ಸಂಶೋಧಕನನ್ನು ಪೀಡಿಸಬಾರದು. ಇಂಥಾದ್ದರಿಂದ ಕೆಲಸ ಸಾಗಲಾರದು. ಸಂಶೋಧನಾ ಕೆಲಸ ಮುಖ್ಯವೆಂಬ ಅರಿವು ಸಂಶೋಧಕನಲ್ಲಿ ಸದಾ ಜಾಗೃತವಾಗಿರಬೇಕು.

ಪ್ರಶ್ನೆಗಳು ಕ್ರಮಬದ್ಧವಾಗಿರಬೇಕು. ಒಂದಕ್ಕೊಂದು ಸಂಬಂಧಿಸುವಂತಿರಬೇಕು. ಪ್ರಶ್ನೆಗಳು ಹಂತ ಹಂತವಾಗಿ ಸಮಸ್ಯೆಯನ್ನು ಬಿಡಿಸುವಂಥಾ ರೀತಿಯಲ್ಲಿರಬೇಕು. ಪ್ರಶ್ನೆಗಳಿಗೆ ಉತ್ತರ ಸಿಗುತ್ತಿರುವಾಗ ಯಾವುದೇ ಉದ್ವೇಗಗಳಿಗೆ ಆಸ್ಪದ ಕೊಡಬಾರದು. ಒಂದು ಪ್ರಶ್ನೆಗೂ ಮತ್ತೊಂದು ಪ್ರಶ್ನೆಗೂ ಸಾಕಷ್ಟು ಕಾಲಾವಕಾಶ ಕೊಡಬೇಕು. ಪ್ರಶ್ನೆಗಳಿಗೆ ಉತ್ತರಗಳನ್ನು ಸಂಗ್ರಹಿಸಿದ ಅನಂತರ ಮಾಹಿತಿಕಾರನಿಗೆ ಆತ ಬಯಸಿದಲ್ಲಿ ಒಂದಷ್ಟು ಸಂಭಾವನೆಯನ್ನು ಕೊಡಬಹುದು. ಮಾಹಿತಿಕಾರರ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟವರನ್ನು ನಿಬಂಧದಲ್ಲಿ ಕೃತಜ್ಞತಾಪೂರ್ವಕವಾಗಿ ಮರೆಯದೆ ನೆನಪಿಸಬೇಕು.

# 7. ಸಂದರ್ಶನ ಮತ್ತು ಕ್ಷೇತ್ರಕಾರ್ಯ

## 7.1 ಮುನ್ನುಡಿ :

ಸಂಶೋಧನೆಯಲ್ಲಿ ಸಂದರ್ಶನ ಮತ್ತು ಕ್ಷೇತ್ರಕಾರ್ಯ ಎರಡೂ ಒಂದಕ್ಕೊಂದು ಪೂರಕವಾದುದು. ತನ್ನ ಸಂಶೋಧನೆಗೆ ನೆರವಾಗುವ ಕ್ಷೇತ್ರಗಳನ್ನು ಸಂದರ್ಶಿಸಿ ತನ್ನ ಆಯ್ಕೆಯ ವಿಷಯದ ವಿಚಾರದಲ್ಲಿ ಅರಿತವರೊಂದಿಗೆ ಕಲೆತು ಬೇಕಾದ ಮಾಹಿತಿಯನ್ನು ಚರ್ಚೆಯ ಮೂಲಕ ಸಂಗ್ರಹಿಸುವುದೇ ಸಂದರ್ಶನ. ಸಂಶೋಧನೆಗೆ ಬೇಕಾದ ಆಳವನ್ನೂ, ವಿಸ್ತಾರವನ್ನೂ ಸಂದರ್ಶನ ನೀಡುತ್ತದೆ. P. V. Young ತನ್ನ Social and Scientific Research ಎಂಬ ಪುಸ್ತಕದಲ್ಲಿ ಸಂದರ್ಶನವನ್ನು "Interview is an effective informal Verbal and Non-Verbal Conversation initiated for specific purposes and focused on certain planned content areas" ಎಂದಿದ್ದಾನೆ. ಸಂಶೋಧಕನಿಗೆ ತನ್ನ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಮುಂದುವರೆಯುವುದಕ್ಕೂ, ಮಾಹಿತಿದಾರನ ವಿಚಾರಗಳನ್ನೂ, ಪ್ರತಿಕ್ರಿಯೆಗಳನ್ನೂ ಅಧ್ಯಯನ ಮಾಡುವುದಕ್ಕೂ ಸಂದರ್ಶನ ಸಹಾಯಕಾರಿಯಾಗುತ್ತದೆ.

ಮಾಹಿತಿ ತಿಳಿಯುವುದಕ್ಕೋಸ್ಕರ ಸಂದರ್ಶನ ನಡೆಸುವವನು 'ಸಂದರ್ಶಕ'ನಾದರೆ ವಿವರಗಳನ್ನು ನೀಡುವವರು 'ಮಾಹಿತಿ'ದಾರರೆನ್ನಿಸಿಕೊಳ್ಳುತ್ತಾರೆ.

## 7.2 ಸಂದರ್ಶನದ ಪ್ರಯೋಜನ :

ವಿಜ್ಞಾನಿಗಳಿಗೆ ಪ್ರಯೋಗಶಾಲೆಯಿದ್ದಂತೆ ಸಾಹಿತ್ಯ/ಜಾನಪದ ಸಂಶೋಧಕರಿಗೆ 'ಸಂದರ್ಶನ' ಪದ್ಧತಿ ಮುಖ್ಯವಾದುದು. ವಿಜ್ಞಾನಿ ರಾಸಾಯನಿಕ ವಸ್ತುಗಳ ಮೇಲೆ ಪ್ರಯೋಗ ನಡೆಸಿ ತನ್ನ ದಾರಿ ರೂಪಿಸಿಕೊಳ್ಳುವಂತೆ, ಸಾಹಿತ್ಯ ಸಂಶೋಧಕ ನಿರ್ದಿಷ್ಟ ವ್ಯಕ್ತಿಗಳನ್ನು ಭೇಟಿ ಮಾಡಿ ಚರ್ಚೆಯ ಮುಖಾಂತರ ತನ್ನ ದಾರಿಯನ್ನು ಸುಗಮಗೊಳಿಸಿಕೊಳ್ಳುತ್ತಾನೆ. ಈ ದಿಶೆಯಲ್ಲಿ ಪರಸ್ಪರ ಅಭಿಪ್ರಾಯ-ಅನುಭವಗಳು ಪ್ರಕಟಗೊಳ್ಳುವುದರಿಂದ ಸಂಶೋಧಕನಿಗೆ ಆಗು-ಹೋಗುಗಳ ನಿಕಟ ಪರಿಚಯವುಂಟಾಗುವುದು. ನೇರವಾದ ಸಮಕಾಲೀನ ಸಂದರ್ಶನದಿಂದ ಎಷ್ಟೋ ಮೌಲ್ಯವತ್ತಾದ ವಿಚಾರಗಳು, ಮಾಹಿತಿಗಳು ದೊರಕಬಹುದು. ಅಂಚೆ ಮೂಲಕ ನಡೆಸುವ ಸಂದರ್ಶನದಿಂದ ಆಗದೆ ಇರುವ ಕೆಲಸ ವೈಯುಕ್ತಿಕ ಸಂದರ್ಶನದಿಂದ ಸಾಧಿತವಾಗುತ್ತದೆ. ಕಾಲ

ಮಿತಿ ಮತ್ತು ದೂರಮಿತಿಗಾಗಿ ರೂಪಿಸಿಕೊಂಡ ಒಂದು ತಾತ್ಕಾಲಿಕ ಸಾಧನ ಅಂಚೆಯ ಮೂಲಕ ಕಲ್ಪಿಸಿಕೊಂಡ ಸಂದರ್ಶನ. ಕೆಲವೊಮ್ಮೆ ವಿಶಿಷ್ಟ ಸಂಗತಿಗಳೂ, ಆಕಸ್ಮಿಕ ಪ್ರವಾಹದಂತೆ ಅಂಚೆಯ ಮೂಲಕದ ಸಂದರ್ಶನದಲ್ಲಿ ಕಾಣಬಹುದು.

## 7.3 ವಿಭಾಗಗಳು :

ಸಂದರ್ಶನ

| ಪ್ರಾಯೋಗಿಕ (Experimental) | ವಿಶ್ಲೇಷಣಾತ್ಮಕ (Analytical) |
| --- | --- |
| ವೈಜ್ಞಾನಿಕ ಸಂದರ್ಶನಗಳು | ಸಾಹಿತ್ಯಿಕ ಸಂದರ್ಶನಗಳು |

ಸಂದರ್ಶನ ನಡೆಸುವ ರೀತಿಯನ್ನು ಅನುಸರಿಸಿ ಹೀಗೆ ವಿಂಗಡಣೆ ಮಾಡಬಹುದು.

ಅ) ಉದ್ದೇಶಿತ ಸಂದರ್ಶನ ಮತ್ತು ದಿಢೀರ್ ಸಂದರ್ಶನ :

Planned Interview and Spot Interview

ಇದು ಪೂರ್ವಯೋಜಿತ ಸಂದರ್ಶನ. ಇದರಲ್ಲಿ ಯಾರನ್ನು ? ಎಲ್ಲಿ ? ಹೇಗೆ ? ಎಂಬಿತ್ಯಾದಿ ಪೂರ್ವತಯಾರಿಯನ್ನು ಮಾಡಿ ನಡೆಸುವ ಸಂದರ್ಶನ. ದಿಢೀರ್ ಸಂದರ್ಶನದಲ್ಲಿ ಸ್ಥಳ/ಕಾಲ/ವ್ಯಕ್ತಿಗಳನ್ನು ಮೊದಲೇ ಗೊತ್ತುಪಡಿಸಿಕೊಳ್ಳದೆ ಅನಿರೀಕ್ಷಿತವಾಗಿ ನಡೆಸುವುದು. ಇದರಿಂದ ಸಂಶೋಧಕನಿಗೆ ಒಮ್ಮೊಮ್ಮೆ ನಿರೀಕ್ಷೆಗಿಂತ ಹೆಚ್ಚಾಗಿ ಪ್ರಯೋಜನವೂ ಉಂಟು. ಕೆಲವೊಮ್ಮೆ ವ್ಯರ್ಥವಾಗುವುದೂ ಉಂಟು. ಉದ್ದೇಶಿತ ಸಂದರ್ಶನದಲ್ಲಾದರೆ ಪೂರ್ವನಿರ್ಧರಿತವಾದ ರೂಪರೇಷೆಯನ್ನು ಹೊಂದಿರುವ ಕಾರಣ ಸಿದ್ಧಪಡಿಸಿಕೊಂಡ ಪ್ರಶ್ನೆಗಳಿಗೆ ಮಾತ್ರವೇ ಸೀಮಿತವಾದ ಉತ್ತರಗಳನ್ನು ಪಡೆಯುವುದು ಇಲ್ಲಿಯ ಕ್ರಮವಾಗಿರುತ್ತದೆ. ಈ ರೀತಿಯ ಸಂದರ್ಶನ ವೈಜ್ಞಾನಿಕ ಕ್ಷೇತ್ರದಲ್ಲಿ ಹೆಚ್ಚು ಸಹಾಯಕಾರಿ.

ಆ) ರಚನಾತ್ಮಕ ಮತ್ತು ಅರಚನಾತ್ಮಕ ಸಂದರ್ಶನ :

Structural and un-Structural Interview

ರಚನಾತ್ಮಕ ಸಂದರ್ಶನದಲ್ಲಿ ಪಡೆಯುವ ಉತ್ತರಗಳು ಕ್ರಮಬದ್ಧವಾಗಿದ್ದು ಒಂದು ವಿಷಯದ ಬಗೆಗೆ ನಾವು ಕೈಗೊಂಡಿರುವ ಸಂಶೋಧನೆಯ ಕ್ರಮಬದ್ಧವಾದ ಬೆಳವಣಿಗೆಯನ್ನು ತೋರಿಸುವಂತಿರುತ್ತದೆ. ಪೂರ್ವ ನಿರ್ಧರಿತವಾದ ಯೋಜನೆಗೆ

ಒಳಪಟ್ಟು ವಿಷಯಕ್ಕೆ ತಕ್ಕಂತೆ ವಿಚಾರ ಸಂಗ್ರಹಕ್ಕೆ ಸಹಾಯಕಾರಿಯಾಗಿರುತ್ತದೆ. ಅರಚನಾತ್ಮಕದಲ್ಲಿಯಾದರೆ ನಾವು ಒಮ್ಮೆಲೇ ಒಬ್ಬ ವ್ಯಕ್ತಿಯನ್ನು ಸಂದರ್ಶಿಸಿ ಇಷ್ಟ ಬಂದಂತೆ ಪ್ರಶ್ನೆಗಳನ್ನೋ, ಸಂದೇಶಗಳನ್ನೋ ಮುಂದಿಟ್ಟು ಪಡೆಯುವ, ಅಪ್ರಾಗಿ ಸಮರ್ಪಕವಲ್ಲದ ಉತ್ತರವನ್ನು ಪಡೆಯುವ ಸಂದರ್ಶನವೂ ಆದೀತು. ವಿಷ್ಟೋ ಬಾರಿ ಸಂಶೋಧಕನಿಗೆ ರಚನಾತ್ಮಕ ಸಂದರ್ಶನದಲ್ಲಿ ದೊರೆಯದ ಮಾಹಿತಿಗಳು ಅರಚನಾತ್ಮಕ ಸಂದರ್ಶನದಲ್ಲಿ ದೊರಕುವ ಸಾಧ್ಯತೆಯಿದೆ. ಇಲ್ಲಿ ಪೂರ್ವಸಿದ್ಧತೆಯಿಲ್ಲದೆ ಊಹನೆಯಿಂದ ಪ್ರಶ್ನೆಗಳನ್ನು ಉಂಟುಮಾಡಿಕೊಂಡು ಸಂದರ್ಶನದ ಮೂಲಕ ಆಧಾರ ಸ್ಪಷ್ಟತೆಯನ್ನು ತಿಳಿದುಕೊಳ್ಳುವುದಕ್ಕೆ ಹೊರಡುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ಈ ರೀತಿಯ ಸಂದರ್ಶನ ಮುಖ್ಯ. ಇಲ್ಲಿನ ಉತ್ತರಗಳಿಗೆ ಒಂದು ಸೀಮಿತ ಚೌಕಟ್ಟು ಇರುವುದಿಲ್ಲ. ಮಾಹಿತಿದಾರನಿಗೆ ಸ್ವತಂತ್ರವಾಗಿ, ವಿಸ್ತೃತವಾಗಿ ವಿವರಿಸುವ ಅವಕಾಶ ಇಲ್ಲಿ ಹೆಚ್ಚು. ಅನಂತರ ಸಂದರ್ಶಕ ತಾನು ಪಡೆದುಕೊಂಡ ಉತ್ತರಗಳಲ್ಲಿ ತನಗೆ ಅಗತ್ಯವಿದ್ದಷ್ಟು ಮಾತ್ರ ಸ್ವೀಕರಿಸಿ ಮಿಕ್ಕದ್ದನ್ನು ಬಿಡುತ್ತಾನೆ.

ಇ) ನಿಯಮಬದ್ಧ ಮತ್ತು ಅನಿಯಮಿತ ಸಂದರ್ಶನ :
Controlled and un-Controlled Interview

ನಿಯಮಬದ್ಧ ಸಂದರ್ಶನಕ್ಕೆ ಉದಾಹರಣೆಯಾಗಿ ವೈದ್ಯ ಮತ್ತು ರೋಗಿಯ ನಡುವೆ ನಡೆಯುವ ಸಂಭಾಷಣೆಯನ್ನು ಗಮನಿಸಬಹುದು. ಒಬ್ಬ ವೈದ್ಯ ತನ್ನ ರೋಗಿಯ ರೋಗದ ಹುಟ್ಟನ್ನು ಅರಿತುಕೊಳ್ಳಲು ತನ್ನ ಪ್ರಶ್ನೆಗಳ ಮಾಲೆಯನ್ನು ಅವನಿಗೆ ಹಾಕಿ ಅದರಿಂದ ಉತ್ತರ ಪಡೆಯುತ್ತಾನೆ. ಅದರಂತೆಯೇ ಸಂಶೋಧಕನಾದವನು ತನ್ನ ಸಮಸ್ಯೆಯನ್ನು ಮಾಹಿತಿದಾರನಿಗೆ ಪ್ರಶ್ನೆಗಳ ಮೂಲಕ ಪರಿಚಯಿಸಿ ಉತ್ತರ ಪಡೆದುಕೊಳ್ಳುತ್ತಾನೆ. ಇದು ಒಂದು ರೀತಿಯ ನಿಯಮಕ್ಕೆ ಬದ್ಧವಾಗಿರುತ್ತದೆ. ವಿಜ್ಞಾನ ಕ್ಷೇತ್ರದಲ್ಲಿಯೂ ಇದು ಒಂದು ನಿಯಮವನ್ನು ಅವಲಂಬಿಸಿರುತ್ತದೆ.

ಅನಿಯಮಿತ ಸಂದರ್ಶನವಾದರೋ ನಿಯಮಬದ್ಧ ಸಂದರ್ಶನಕ್ಕೆ ವಿರುದ್ಧವಾದುದು. ಇಲ್ಲಿ ಸಂದರ್ಶಕ ತನ್ನ ಇಚ್ಛೆಯಂತೆ ಸಂದರ್ಶನ ನಡೆಸಬಹುದು. ಹಾಗೆಯೇ ಮಾಹಿತಿದಾರನಿಗೂ ಸ್ವಾತಂತ್ರ್ಯವಿರುತ್ತದೆ. ಅಗತ್ಯಕ್ಕಿಂತ ಹೆಚ್ಚಾಗಿ ಮಾಹಿತಿ ಸಂಗ್ರಹಿಸಬಹುದು.

ಈ) ವೈಯುಕ್ತಿಕ ಸಂದರ್ಶನ ಮತ್ತು ಮುಕ್ತ ಸಾಮೂಹಿಕ ಸಂದರ್ಶನ :
Personal and Open Comman Interview

ವ್ಯಕ್ತಿಯೊಬ್ಬನನ್ನು ಭೇಟಿಮಾಡಿ ಸಂದರ್ಶನ ನಡೆಸುವುದು. ಪ್ರತಿಯೊಬ್ಬ

ನನ್ನೂ ಪ್ರತ್ಯೇಕವಾಗಿ ಸಂದರ್ಶಿಸುವುದು. ಇದು ಸಾಹಿತ್ಯ ಹಾಗೂ ವೈಜ್ಞಾನಿಕ ಕ್ಷೇತ್ರಗಳಲ್ಲಿ ಬಳಕೆಯಲ್ಲಿದೆ.

ಸಮೂಹ ಸಂದರ್ಶನ ಜಾನಪದ, ಭಾಷೆ ಮುಂತಾದ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸುವವರಿಗೆ ಹೆಚ್ಚು ಉಪಯುಕ್ತವಾದುದು. ಇಲ್ಲಿ ಸಂದರ್ಶಕರೂ ಹಲವರಿರ ಬಹುದು. ಮಾಹಿತಿದಾರರೂ ಅನೇಕ ಮಂದಿ ಇರಬಹುದು. ಇಲ್ಲಿ ಸಾಮೂಹಿಕ ವಾಗಿ ಪಡೆದುಕೊಂಡ ಉತ್ತರವನ್ನು ಸಂದರ್ಶಕರು ತಮ್ಮೊಳಗೆ ಚರ್ಚಿಸಿಕೊಂಡು ಯೋಗ್ಯವಾದುದನ್ನು ಸ್ವೀಕರಿಸುತ್ತಾರೆ.

ಊ) ಅಂಚೆ ಮೂಲಕ ಸಂದರ್ಶನ :
Postal Interview

ಇದು ಒಂದು ಸೀಮಿತ ಚೌಕಟ್ಟನ್ನು ಹೊಂದಿರುತ್ತದೆ. ನೇರವಾದ ಸಂದರ್ಶನ ದಿಂದ ದೊರೆಯಬಹುದಾದ ಪ್ರಯೋಜನ ಇದರಿಂದ ಸಿಗದೇಹೋಗಬಹುದು. ಕಾಲದ ಗಣನೆಯಿಂದ, ದೂರದ ವ್ಯಕ್ತಿಯೊಬ್ಬನನ್ನು ಸಂದರ್ಶಿಸುವ ಸಲುವಾಗಿ, ಹಣದ ಮಿತಿಯಿಂದ ಈ ರೀತಿಯ ಸಂದರ್ಶನ ಕೈಗೊಳ್ಳಬಹುದು. ಇದರಲ್ಲಿ ಪರಿಪೂರ್ಣತೆ ಇರುವುದಿಲ್ಲ. ಸೀಮಿತ ಪ್ರಶ್ನೆಗೆ ಸೀಮಿತ ಉತ್ತರ ಮಾತ್ರ ಸಾಧ್ಯ.

## 7.4 ಸಂದರ್ಶಕನ ಗುಣಗಳು :

ಸಂದರ್ಶಕನಿಗೆ ವಿಷಯಕ್ಕೆ ತಕ್ಕಂತೆ ತಿಳುವಳಿಕೆಯಿರಬೇಕು. ಸಂಶೋಧನಾ ವಿಧಾನ ಮತ್ತು ತಂತ್ರದ ವಿಚಾರದಲ್ಲಿ ಸ್ಪಷ್ಟವಾದ ಅರಿವು ಸಂಶೋಧಕನಿಗಿರಬೇಕು. ಇಲ್ಲಿ ಸಂದರ್ಶಕನಿಗೆ ಪ್ರಾಮಾಣಿಕತೆ ಹಾಗೂ ವಿಷಯಾಸಕ್ತಿ ಬಹುಮುಖ್ಯ. ಹಾಗೆಯೇ ಮಾಹಿತಿದಾರನಿಗೂ ಸರಿಯಾದ ಉತ್ತರವನ್ನು ಕೊಡುವ ಜಾಣ್ಮೆ ಮತ್ತು ತಾಳ್ಮೆ ಇರಬೇಕು. ಮಾಹಿತಿದಾರನು ನೀಡುವ ಉತ್ತರವನ್ನು ಸ್ಪಷ್ಟವಾಗಿ ಅರಿತುಕೊಂಡು ತಪ್ಪಿಲ್ಲದಂತೆ ಬರೆದುಕೊಳ್ಳುವ ಸಾಮರ್ಥ್ಯ ಸಂದರ್ಶಕನಿಗಿರಬೇಕು. ಸಂದರ್ಶನದ ನಿಯಮವನ್ನು ಕ್ರಮವಾಗಿ ಪಾಲಿಸಬೇಕು. ವಿನಯ, ವಿಧೇಯತೆ, ಸಹನೆ, ಶಾಂತಿ, ವಿಷಯಾಸಕ್ತಿ ಸಂದರ್ಶಕನಿಗಿರಬೇಕಾದ ಮೂಲಭೂತ ಗುಣಗಳು. ಯಾವುದೇ ಕಾರಣಕ್ಕೂ ಸಂದರ್ಶಕ ಮಾಹಿತಿದಾರನ ಮೇಲೆ ಕೋಪಗೊಳ್ಳಬಾರದು. ಮಾಹಿತಿ ದಾರ ಕೋಪಗೊಂಡರೂ ಸಂದರ್ಶಕ ತಾಳ್ಮೆಯಿಂದಿರಬೇಕು.

## 7.5 ಪೂರ್ವ ಸಿದ್ಧತೆ :

ಸಂದರ್ಶಕನು ವ್ಯವಸ್ಥಿತವಾಗಿ, ಜಾಗರೂಕನಾಗಿ, ಸಂದರ್ಶನ ನಡೆಸುವುದರಿಂದ ಯಶಸ್ವಿಯಾಗಿ ಒಳ್ಳೆಯ ಫಲಿತಾಂಶವನ್ನು ಮಾಹಿತಿದಾರನಿಂದ ಪಡೆದುಕೊಳ್ಳಬಹುದು.

ಸಂದರ್ಶಕ ಸಂದರ್ಶಿಸುವಲ್ಲಿ ಅನುಸರಿಸಬೇಕಾದ ಕೆಲವು ಕ್ರಮಗಳನ್ನು ಹೀಗೆ ಪಟ್ಟಿ ಮಾಡಬಹುದು.

1) ಸಂದರ್ಶನದ ಪೂರ್ವಯೋಜನೆ, ಸಂದರ್ಶಿಸುವ ವ್ಯಕ್ತಿ, ಸ್ಥಳ, ಸಮಯ ಇವುಗಳನ್ನು ನಿಗದಿಪಡಿಸುವುದು.

2) ಸಂದರ್ಶಿಸಲ್ಪಡುವವನಿಗೆ ತನ್ನ ವಿಷಯಕ್ಕೆ ಇರುವ ಸಂಬಂಧವನ್ನು ಖಚಿತಪಡಿಸಿಕೊಳ್ಳುವುದು.

3) ಮಾಹಿತಿದಾರನ ಗುಣ-ಸ್ವಭಾವಕ್ಕೆ ತಕ್ಕಂತೆ ಹೊಂದಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಳ್ಳುವುದು.

4) ಮಾಹಿತಿದಾರನಿಗೆ ಹಾಕಲಿರುವ ಪ್ರಶ್ನೆಗಳನ್ನು ಮೊದಲೇ ತಯಾರಿಸಿಟ್ಟುಕೊಳ್ಳುವುದು. ಸಂದರ್ಶನದ ಸುಲಿಲಿತ ನಡೆಗೆ ಇದು ಪ್ರಯೋಜನಕಾರಿ.

5) ಅಗತ್ಯವಿರುವ ಪರಿಕರಗಳನ್ನು ಕೊಂಡೊಯ್ಯುವುದು. ಬೇಕಷ್ಟು ಕಾಗದದ ಹಾಳೆಗಳು, ಪೆನ್ನು, ಪೆನ್ಸಿಲ್ಲು, ಕ್ಯಾಮೆರಾ, ಟೇಪ್‌ರೆಕಾರ್ಡರ್ ಇತ್ಯಾದಿ.

6) ಸಂದರ್ಶನಕ್ಕೆ ಹೋಗುವಾಗ ಜೊತೆಗೆ ಆಸಕ್ತಿಯಿರುವ ಇನ್ನೊಬ್ಬರನ್ನು ಕರೆದುಕೊಂಡು ಹೋದರೆ, ಬರೆದುಕೊಳ್ಳಲು ಸಹಾಯವಾಗುತ್ತದೆ. ಒಮ್ಮೊಮ್ಮೆ ಸಂದರ್ಶಿಸುವಾಗ ಬರೆದುಕೊಳ್ಳಲು ಸಾಧ್ಯವಾಗದೇ ಹೋಗಬಹುದು. ಆ ಕಾರಣಕ್ಕಾಗಿ ಜೊತೆಗೆ ಮತ್ತೊಬ್ಬರಿದ್ದರೆ ದಾಖಲಿಸಿಕೊಳ್ಳಲು ಅನುಕೂಲ. ನಂತರ ಇಬ್ಬರ ಉತ್ತರಗಳನ್ನೂ ಹೋಲಿಸಿ ನೋಡಿ ಸ್ಪಷ್ಟ ಅಭಿಪ್ರಾಯಕ್ಕೆ ಬರಬಹುದು.

7) ಸರಳವಾದ ಪ್ರಶ್ನೆಗಳನ್ನೇ ಕೇಳಬೇಕು. ಸರಳವಾದ ಉತ್ತರವನ್ನೇ ನಿರೀಕ್ಷಿಸಬೇಕು. ಎರಡು ಪ್ರಶ್ನೆಗಳ ನಡುವೆ ವಿಶ್ರಾಂತಿಗಾಗಿ ಅಂತರವಿರಬೇಕು. ಮಾಹಿತಿದಾರನನ್ನು ಗೊಂದಲದಲ್ಲಿ ಸಿಲುಕಿಸುವ ಪ್ರಶ್ನೆ ಹಾಕಬಾರದು.

8) ಟಿಪ್ಪಣಿ ಮಾಡಿಕೊಳ್ಳುವ ಕ್ರಮವನ್ನು ಸಂದರ್ಶಕರು ಅರಿತಿರಬೇಕು. ಸೌಲಭ್ಯಕ್ಕಾಗಿ ಸಂಕೇತಗಳನ್ನು ಬಳಸಬಹುದು.

9) ಯಾವುದೇ ಕಾರಣಕ್ಕೂ ಸಂದರ್ಶಕ-ಮಾಹಿತಿದಾರನ ಮೇಲೆ ಒತ್ತಾಯ ಹೇರುವುದು, ದಾಕ್ಷಿಣ್ಯಕ್ಕೆ ಒಳಪಡಿಸುವುದು, ಕೋಪಗೊಳ್ಳುವುದು ಮಾಡಬಾರದು. ಮಾಹಿತಿದಾರ ಕೋಪಿಸಿಕೊಂಡರೂ ಸಹನೆಯಿಂದಿದ್ದು, ಅವನ ಕ್ರೋಧವನ್ನು ತಣಿಸುವ ಪ್ರಯತ್ನ ಮಾಡಬೇಕು.

10) ಪ್ರಶ್ನೆ ಕೇಳುವಾಗ, ಉದ್ವೇಗ, ಉದ್ವಿಗ್ನ ಸ್ಥಿತಿಗೆ ಪಕ್ಕಾಗದೆ ಸಹಜ ಕ್ರಿಯೆಯೆಂಬಂತೆ ಸಂದರ್ಶನ ನಡೆಸಬೇಕು.

ಹೀಗೆ ಪೂರ್ವಸಿದ್ಧತೆಯಿಂದ ನಡೆಸಿದ ಸಂದರ್ಶನ ಉಪಯುಕ್ತ ಮಾಹಿತಿ ದೊರಕಿಸಿಕೊಳ್ಳುವಲ್ಲಿ ಸಹಾಯಕಾರಿಯಾಗುತ್ತದೆ.

## 7.6 ಸಂದರ್ಶನಕ್ಕೆ ಸಿದ್ಧಪಡಿಸುವ ಪ್ರಶ್ನೆಗಳಲ್ಲಿ ಗಮನಿಸಬೇಕಾದ ಅಂಶಗಳು :

ಉತ್ತಮ ಸಂದರ್ಶನಕ್ಕೆ, ಸಂದರ್ಶಕ ತಯಾರಿಸಿಕೊಳ್ಳುವ ಸುವ್ಯವಸ್ಥಿತ ಪ್ರಶ್ನೆ ಮಾಲಿಕೆ ಬಹುಮಟ್ಟಿಗೆ ಮುಖ್ಯ ಕಾರಣ. ಪ್ರಶ್ನೆಮಾಲಿಕೆಯ ತಯಾರಿಯಲ್ಲಿ ಸಂದರ್ಶಕ ಗಮನಿಸಬೇಕಾದ ಕೆಲವು ಅಂಶಗಳನ್ನು ಹೀಗೆ ಪಟ್ಟಿಮಾಡಬಹುದು.

1) ವಿಷಯಕ್ಕೆ ತಕ್ಕಂತೆ ಪ್ರಶ್ನೆಗಳಿರಬೇಕು. ತನಗೇ ಅರ್ಥವಾಗದ ವಿಷಯಗಳ ಬಗ್ಗೆ ಪ್ರಶ್ನಿಸಬಾರದು. ಪಾಂಡಿತ್ಯ ಪ್ರದರ್ಶನಕ್ಕೆ ಇದು ಸ್ಥಳವಲ್ಲ ಎಂಬ ಪ್ರಜ್ಞೆ ಇರಬೇಕು, ಅಲ್ಲದೆ ಪ್ರಶ್ನೆಗಾಗಿ ಪ್ರಶ್ನೆ ಕೇಳಬಾರದು.

2) ಅಸಂಬದ್ಧ, ಅನಗತ್ಯ, ಕ್ಲಿಷ್ಟ ಪ್ರಶ್ನೆ ಕೇಳಬಾರದು. ಸರಳವಾದ ಪ್ರಶ್ನೆ ಹಾಕಿ ಚುಟುಕಾದ ಉತ್ತರ ನಿರೀಕ್ಷಿಸುವಂತಿರಬೇಕು.

3) ಮಾಹಿತಿದಾರನ ವ್ಯಕ್ತಿತ್ವಕ್ಕೆ ಧಕ್ಕೆ ಬರುವಂತಹ ಗೋಜಲು ಗೋಜಲಾದ ಪ್ರಶ್ನೆ ಕೇಳಬಾರದು.

4) ಪ್ರಶ್ನೆಗಳು ಸಂಕೇತಗಳಿಂದ ಹೊರತಾಗಿದ್ದು, ಕ್ಲಿಷ್ಟವಾಗಿರದೆ, ಸ್ಫುಟವಾಗಿ ವಿವರವಾಗಿರಬೇಕು.

5) ಸಂದರ್ಶಕನ–ಮಾಹಿತಿದಾರನ ಭಾಷೆ ಬೇರೆಯಿದ್ದಲ್ಲಿ ದ್ವಿಭಾಷಿಯೊಬ್ಬನ ಸಹಾಯ ಅತ್ಯಗತ್ಯ.

6) ಪ್ರಶ್ನೆಗಳು ಒಂದರೊಡನೊಂದು ಹೊಂದಿಕೊಂಡಂತಿರಬೇಕು. ಕ್ರಮಬದ್ಧವಾದ ಉತ್ತರವನ್ನು ಹೊರಡಿಸುವಂತಿರಬೇಕು.

ಈ ರೀತಿ ಕ್ರಮಬದ್ಧ ಸಂದರ್ಶನದಿಂದ ಸಂಶೋಧನೆಗಾಗುವ ಪ್ರಯೋಜನ ಅಂತ್ಯಂತ ಹೆಚ್ಚು. ಸಂಶೋಧನೆ ಪೂರ್ಣವಾಗಲು ಒಂದಲ್ಲ ಒಂದು ರೀತಿಯ ಸಂದರ್ಶನ ಅಗತ್ಯವಾಗುತ್ತದೆ. ಸಂದರ್ಶನವಿಲ್ಲದೆ ಸಂಶೋಧನೆಯಿಲ್ಲ ಎಂದರೂ ಹೆಚ್ಚು ಸರಿಯಾದೀತು.

## 7.7 ಸಂಶೋಧನೆಯಲ್ಲಿ ಕ್ಷೇತ್ರಕಾರ್ಯದ ಸ್ಥಾನ :

ಜಾನಪದ, ಸಾಂಸ್ಕೃತಿಕ ಅಧ್ಯಯನ, ಭಾಷಾವಿಜ್ಞಾನ ಮೊದಲಾದ ವಿಷಯಗಳಲ್ಲಿ ಸಂಶೋಧನೆ ನಡೆಸುವಾಗ ಕ್ಷೇತ್ರಕಾರ್ಯವೇ ಮುಖ್ಯವಾಗುತ್ತದೆ. ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಗೆ ಕ್ಷೇತ್ರಕಾರ್ಯದ ಉಪಯೋಗ ಕಡಿಮೆ ಎನ್ನಬಹುದು. ಹೊರಗಿನ ಗ್ರಂಥಾಲಯಗಳಿಗೆ ಹೋಗಿ ವಿಷಯ ಸಂಗ್ರಹಣೆ ನಡೆಸುವುದೂ ಕ್ಷೇತ್ರ ಕಾರ್ಯವೇ ಆಗುತ್ತದೆ. ಸಾಹಿತ್ಯದಲ್ಲಿ ಸಂಶೋಧನೆ ನಡೆಸುವಾಗ ಕೆಲವೊಮ್ಮೆ ಕವಿ-ಲೇಖಕರನ್ನು ಸಂದರ್ಶನ ನಡೆಸಬೇಕಾಗಿ ಬರುತ್ತದೆ. ಅಲ್ಲದೆ ಕೆಲವು ಮನೆಗಳಲ್ಲಿರಬಹುದಾದ ಹಳೆಯ ಹಸ್ತ ಪ್ರತಿಗಳು, ತಾಡವೋಲೆಗಳು ಮೊದಲಾದ ಆಕರಗಳನ್ನು ಸಂಗ್ರಹಿಸುವುದೂ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದ್ದೇ ಆಗಿದೆ, ಹಾಗಾಗಿ ಸಾಮಾನ್ಯವಾಗಿ ಯಾವುದೇ ಸಂಶೋಧನೆಗೆ ಕ್ಷೇತ್ರಕಾರ್ಯದ ಅಗತ್ಯವಿದೆ ಎಂದು ಹೇಳಬಹುದು. ಶಾಸನಗಳನ್ನು ಅಧ್ಯಯನ ನಡೆಸುವುದು, ಕ್ಷೇತ್ರ ಹಾಗೂ ಸ್ಥಳ ಪುರಾಣಗಳ ಬಗೆಗೆ ತಿಳಿದುಕೊಳ್ಳುವುದು, ಮೊದಲಾದ ವಿಚಾರಗಳಿಗೂ ಕ್ಷೇತ್ರಕಾರ್ಯದ ಅಗತ್ಯವಿರುತ್ತದೆ.

ಸಾಹಿತ್ಯದಲ್ಲಿ ವಿಮರ್ಶೆಯ ಧೋರಣೆಗಳು ಸದಾ ಬದಲಾಗುತ್ತಲೇ ಇರುವುದು ಸಾಮಾನ್ಯ. ಇಂಥಾ ಸಂದರ್ಭಗಳಲ್ಲೂ ಅವಕ್ಕೆ ಸಂಬಂಧಿಸಿದ ವಿಚಾರಗಳನ್ನು ಆಯಾಯ ಜಾಗಗಳಿಗೆ ಹೋಗಿ ಸಂಗ್ರಹಿಸಬೇಕಾಗುತ್ತದೆ. ಹಳೆಯ ಯಾವುದೋ ಒಂದು ಹಸ್ತಪ್ರತಿಯನ್ನು ಅಧ್ಯಯನ ನಡೆಸುವಾಗ ಅದರ ಬಗೆಗೆ ಬೇರಾರಾದರೂ ವಿಷಯ ಸಂಗ್ರಹಿಸಿದ್ದಿರಲೂಬಹುದಾದ ಸಾಧ್ಯತೆಗಳಿರುತ್ತವೆ. ಆಗ ಅಂಥ ವ್ಯಕ್ತಿಗಳನ್ನು ಸಂಧಿಸಿ, ಚರ್ಚಿಸಿ, ತಮಗೆ ಬೇಕಾದ ಮಾಹಿತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಒಂದು ಜನಾಂಗದ ಭಾಷೆ, ಸಂಸ್ಕೃತಿ, ಆಚಾರ-ವಿಚಾರ ಮೊದಲಾದವುಗಳನ್ನು ಸಂಶೋಧಿಸುವಾಗ ಕ್ಷೇತ್ರಕಾರ್ಯವು ಮಹತ್ವದ್ದಾಗುತ್ತದೆ. ಕ್ಷೇತ್ರಕಾರ್ಯಕ್ಕೆ ಹೋಗುವಾಗ ಅದಕ್ಕೆ ಸಂಬಂಧಿಸಿದ ಪ್ರಶ್ನಾವಳಿಗಳನ್ನು ಪೂರ್ವಭಾವಿಯಾಗಿ ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ಮುಖ್ಯವಾದ ಪ್ರಶ್ನೆಗಳೇ ತಪ್ಪಿಹೋಗುವ ಅಪಾಯವಿರುತ್ತದೆ. ಕ್ಷೇತ್ರಕಾರ್ಯ ನಡೆಸುವ ಮೊದಲೇ ಮಾಹಿತಿ ಸಂಗ್ರಹಣೆಯ ಬಗೆಗೆ ಸರಿಯಾದ ಕಲ್ಪನೆಗಳನ್ನಿಟ್ಟು ಸಜ್ಜಾಗಿ ಹೋಗಬೇಕು. ಇಲ್ಲಿ ಕಾಗದ ಪತ್ರಗಳು, ಟೇಪ್‌ರೆಕಾರ್ಡರ್ ಮೊದಲಾದವುಗಳನ್ನು ಉಪಯೋಗಿಸಿಕೊಳ್ಳಬಹುದು. ಮಾಹಿತಿ ಸಂಗ್ರಹಣೆಗಳು ಬರೆದು ದಾಖಲಿಸಿಕೊಳ್ಳಬಹುದಾದುವನ್ನು ಹಾಗೆಯೇ ಪಡೆಯಬಹುದು. ಇನ್ನು ಕೆಲವನ್ನು ಧ್ವನಿಮುದ್ರಣದಿಂದ ಪಡೆದು ಮುಂದೆ ಅವನ್ನು ಅಕ್ಷರ ರೂಪಕ್ಕಿಳಿಸಿ ಬಳಸಿಕೊಳ್ಳಬಹುದು.

## 7.8 ಕ್ಷೇತ್ರಕಾರ್ಯದ ವ್ಯಾಪ್ತಿ ಮತ್ತು ಪ್ರಯೋಜನ :

1. ಹಸ್ತಪ್ರತಿ, ಶಾಸನ ಮೊದಲಾದ ಪ್ರಾಚೀನ ವಿಚಾರಗಳ ಲಿಖಿತ ದಾಖಲೆಗಳ ಸಂಗ್ರಹಣೆ.
2. ಅಪರೂಪದ ಕೃತಿಗಳು, ಗ್ರಂಥಾಲಯಗಳು ಹಾಗೂ ಖಾಸಗಿ ವ್ಯಕ್ತಿಗಳಿಂದ.
3. ಸಂದರ್ಶನ, ಚರ್ಚೆಗಳಿಂದ ಮೌಖಿಕವಾಗಿ ಸಂಗ್ರಹಿಸುವುದು.
4. ಧ್ವನಿ ಮುದ್ರಣಗಳಿಂದ ಹಾಡು, ಮೊದಲಾದವುಗಳಿಂದ.
5. ಅಷ್ಟಾಗಿ ಬೆಳಕಿಗೆ ಬಾರದ ಆದರೆ ಸಾಹಿತ್ಯದಲ್ಲಿ ಅಪೂರ್ವ ಕೆಲಸಗಳನ್ನು ಮಾಡಿದ ಕವಿಗಳು ಹಾಗೂ ಕೃತಿಗಳನ್ನು ಬೆಳಕಿಗೆ ತರಬಹುದು. ಇಂಥಾ ಅನೇಕ ಕವಿಗಳು ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದವರಿದ್ದಾರೆ.

ಕ್ಷೇತ್ರಕಾರ್ಯದಲ್ಲಿ ಸಂಶೋಧಕ ವೈಯುಕ್ತಿಕವಾಗಿ ಪಾಲ್ಗೊಳ್ಳುವುದರಿಂದ ಅತಿ ಹೆಚ್ಚಿನ ವಿಚಾರ–ವಿನಿಮಯಕ್ಕೆ, ಸಂದೇಹ ನಿವಾರಣೆಗೆ, ವಿಚಾರ ಸ್ಪಷ್ಟತೆಗೆ ಬಹಳಷ್ಟು ಅನುಕೂಲವಾಗುತ್ತದೆ. ಕೆಲವೊಂದು ದಾಖಲೆಗಳನ್ನು, ವಿಚಾರಗಳನ್ನು ಸ್ವತಃ ಪರಿಶೀಲಿಸುವುದರಿಂದ ಅವು ಪ್ರಾಥಮಿಕ ದಾಖಲೆಗಳಾಗಿ ಆತನ ನಿಬಂಧಕ್ಕೆ ಹೆಚ್ಚು ತೂಕವನ್ನು ಕೊಡಬಲ್ಲುದು.

## 7.9 ಮಾಹಿತಿಕಾರ ಮತ್ತು ಮಾಹಿತಿ :

ಸಂಶೋಧನೆಗೆ ಸಂಬಂಧಿಸಿದ ಯಾವುದೇ ವಿಚಾರಗಳನ್ನು ಒದಗಿಸುವಾತನು ಮಾಹಿತಿಕಾರ (Informant) ನಾಗುತ್ತಾನೆ. ಆತನ ವ್ಯಕ್ತಿತ್ವ ಹಾಗೂ ಅಸ್ತಿತ್ವಗಳ ಬಗ್ಗೆ ಸಂಶೋಧಕ ತಲೆ ಕೆಡಿಸಿಕೊಳ್ಳಲೇಬಾರದು. ಆತನು ಯಾವುದೇ ಅಂತಸ್ತಿನವನಿರಬಹುದು. ಸಂಶೋಧನೆಗೆ ಸಂಬಂಧಿಸಿದ ವಿಚಾರಗಳನ್ನು ಆತನಿಂದ ಪಡೆಯುವಾಗ ಬಹಳ ಎಚ್ಚರಿಕೆಯಿಂದ ಮಾಹಿತಿಗಳನ್ನು ಸಂಗ್ರಹಿಸುವುದೇ ಸಂಶೋಧಕನ ಉದ್ದೇಶವಾಗಬೇಕು. ಮಾಹಿತಿಕಾರನಿಗೆ ತಿಳಿದಿರುವ ವಿಚಾರಗಳನ್ನು ಹೇಗಾದರೂ ತಿಳಿಯಲೇಬೇಕೆನ್ನುವುದೇ ಸಂಶೋಧಕನಿಗಿರಬೇಕಾದ ಧ್ಯೇಯವಾಗಿರಬೇಕು. ಆತನ ಅನುಭವದ ಮಟ್ಟಗಳನ್ನು ಜಾಗರೂಕತೆಯಿಂದ ತಿಳಿಯುವುದು ಸಂಶೋಧಕನ ಕರ್ತವ್ಯ. ಮಾಹಿತಿಕಾರನನ್ನು ಸರಿಯಾಗಿ ಗೌರವಿಸುವುದರಿಂದ ಇದು ಸುಲಭವಾಗುತ್ತದೆ.

ಮಾಹಿತಿಕಾರನಿಂದ ವಿಷಯಗಳನ್ನು ಸಂಗ್ರಹಿಸುವಾಗ ಸಂಶೋಧಕನಿಗೆ ಸಂಬಂಧಪಡದೇ ಇರುವ ವಿಚಾರಗಳನ್ನೂ ಕೆಲವೊಮ್ಮೆ ಕೇಳಿಸಿಕೊಳ್ಳಬೇಕಾದೀತು. ಇಂಥಾ

ಸಂದರ್ಭಗಳಲ್ಲಿ ಸಂಶೋಧಕ ಒಂದಿಷ್ಟೂ ತಾಳ್ಮೆಗೆಡಬಾರದು. ತನ್ನ ಸಂಶೋಧನೆಯ ಗುರಿಯೇ ಮುಖ್ಯವಾಗಬೇಕೇ ಹೊರತು ಮನರಂಜನೆಯೋ ಮತ್ತೇನೋ ಸಂಶೋಧಕನ ತಾಳ್ಮೆಯನ್ನು ಪರೀಕ್ಷಿಸಬಾರದು.

ಕ್ಷೇತ್ರ ಕಾರ್ಯದಲ್ಲಾಗಲೀ ಮಾಹಿತಿಕಾರರ ಸಂದರ್ಶನದಿಂದಲಾಗಲೀ, ಯಾವುದೇ ಸಂದರ್ಭಗಳಲ್ಲಿ ಸಂಶೋಧಕನು ಸಂಗ್ರಹಿಸುವ ಟಿಪ್ಪಣಿಗಳು ಸ್ಫುಟವಾಗಿ ಚೊಕ್ಕಟವಾಗಿರಬೇಕು. ಏಕೆಂದರೆ ಒಂದು ಸಲ ಮಾಡಿದ ಕೆಲಸವನ್ನು ಮತ್ತೆ ಮತ್ತೆ ಮಾಡುವಂತಿರಬಾರದು. ಸಂಶೋಧಕನು ತನಗೆ ಸಾಧ್ಯವಾದಷ್ಟು ಮಟ್ಟಿಗೆ ವಿಷಯ ವಿಂಗಡಣೆ ಮಾಡಿಕೊಂಡ ಕ್ರಮದಲ್ಲೇ ಮಾಹಿತಿಗಳನ್ನು ಸಂಗ್ರಹಿಸಿಕೊಂಡರೆ ಮುಂದೆ ಅದನ್ನು ಪರಿಷ್ಕರಿಸಿ ಬರೆಯುವಾಗ ಸುಲಭವಾಗುತ್ತದೆ, ಸಮಯದ ಉಳಿತಾಯವೂ ಆಗುತ್ತದೆ.



# 8. ಸಂಶೋಧಕ – ಮಾರ್ಗದರ್ಶಿ

## 8.1 ಮುನ್ನುಡಿ :

ಸಂಶೋಧಕ ಮತ್ತು ಮಾರ್ಗದರ್ಶಿ ಒಂದು ರೀತಿಯಲ್ಲಿ ನಾಣ್ಯದ ಎರಡು ಮುಖಗಳಂತೆ. ಸಂಶೋಧಕನ ಶ್ರಮ ಮಾರ್ಗದರ್ಶಿಯ ಪರಿಶ್ರಮ ಇದ್ದರೇನೇ ಸಂಶೋಧನೆಯೆಂಬ ನಾಣ್ಯಕ್ಕೆ ಮೌಲ್ಯ ಉಂಟಾಗಲು ಸಾಧ್ಯ. ಇಲ್ಲಿ ಸಂಶೋಧಕನ ಸತತ ಶ್ರಮ, ಅಭ್ಯಾಸಗಳ ಜೊತೆಗೆ ಮಾರ್ಗದರ್ಶಿಯ ಪ್ರೇರಣೆ, ಪ್ರೋತ್ಸಾಹ, ತಿದ್ದುಪಡಿಗಳೂ ಅಷ್ಟೇ ಮುಖ್ಯವಾದವುಗಳು. ಇಲ್ಲಿ ಒಬ್ಬರಿಗೊಬ್ಬರು ವೈಮನಸ್ಯವನ್ನಾಗಲೀ, ಕೀಳರಿಮೆಯನ್ನಾಗಲೀ ಹೊಂದಿರಬೇಕೂಡದು. ಸಂಶೋಧನೆಯೆಂಬುದು ಇವರಿಬ್ಬರ ಬೌದ್ಧಿಕ ಪ್ರಗತಿ, ಚಿಂತನೆ, ಮಂಥನಗಳಿಂದ ನಡೆಯುವ ಕಾರ್ಯ.

## 8.2 ಸಂಶೋಧಕ ಹಾಗೂ ಸಂಶೋಧನ ಪರಿಕರಗಳು :

ಸಂಶೋಧಕನಲ್ಲಿರಬೇಕಾದ ಹಲವು ಗುಣಗಳನ್ನು ಸಮೀಕ್ಷಿಸಿ ಹೇಳುವುದಾದರೆ ಆತನೊಬ್ಬ ಜಿಜ್ಞಾಸು. ಎಂದರೆ ತಿಳಿಯಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ವ್ಯಕ್ತಿ, ಸತತ ಶ್ರಮದಿಂದ ಮುಕ್ತವಾದ ಮನಸ್ಸಿನಿಂದ ಕೂಡಿ, ಬೌದ್ಧಿಕವಾಗಿ ಯಾವಾಗಲೂ ವಿಚಾರಗಳನ್ನು ಸಂಗ್ರಹಿಸುತ್ತಿರುವವನು. ಆತನಿಗೆ ಯಾವುದೇ ವಿಚಾರವು ಗೌಣವಾಗಿ ಕಾಣಿಸುವುದಿಲ್ಲ, ಎಂದರೆ ಸಂಶೋಧನೆಗೆ ಯಾವುದೇ ವಸ್ತುವೂ, ವಿಷಯವೂ ಯೋಗ್ಯವಾಗಿರುತ್ತದೆ ಎಂದರ್ಥ. ಇದು ವಿಶಾಲವಾದ ಮನೋಭಾವವನ್ನು ತೋರ್ಪಡಿಸುತ್ತದೆ. ಸಂಶೋಧಕನ ದೃಷ್ಟಿಯಲ್ಲಿ ಯಾವುದೇ ವಿಷಯವಾದರೂ ಮಹತ್ತರವಾದುದೇ. ಆತನ ದೃಷ್ಟಿ ಅದರ ಮೇಲೆಯೇ ಕೇಂದ್ರೀಕೃತವಾಗಿರುತ್ತದೆ. ಇದು ಒಬ್ಬೊಬ್ಬರಲ್ಲಿ ಒಂದೊಂದು ರೀತಿಯಲ್ಲಿರಬಹುದು. ಪ್ರತಿಯೊಬ್ಬ ಸಂಶೋಧಕನೂ ಆತನದ್ದೇ ಆದ ಅಭಿರುಚಿಯ ವಿಚಾರಗಳನ್ನು ರೂಪಿಸಿಕೊಂಡು ವಿಷಯವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ಸಾಹಿತ್ಯ ಸಂಶೋಧನೆಯಲ್ಲಿ ಕೆಲವರಿಗೆ ಗ್ರಂಥಸಂಪಾದನೆಯಿದ್ದಂತೆ, ಕೆಲವರಿಗೆ ಸಾಹಿತ್ಯದ ಯಾವುದೇ ಪ್ರಕಾರವಿರಬಹುದು. ಉದಾಹರಣೆಗೆ ಕಾದಂಬರಿಯೋ, ನಾಟಕವೋ, ಕಾವ್ಯವೋ ಇರಬಹುದು. ಇನ್ನು ಕೆಲವರಿಗೆ ಶಾಸನಗಳನ್ನು ಅಧ್ಯಯನ ನಡೆಸುವ ಆಸಕ್ತಿ ಇರಬಹುದು. ಮತ್ತೆ ಕೆಲವರು ತೌಲನಿಕ ವಿಚಾರಗಳನ್ನು ಆಯ್ದುಕೊಳ್ಳಬಹುದು. ಉಭಯ ಭಾಷೆಗಳ ಬಗೆಗೆ ತೌಲನಿಕವಾಗಿ ಅಧ್ಯಯನ, ಸಂಶೋಧನೆ ನಡೆಸುವುದೂ ಇದೆ. ಇವೆಲ್ಲಾ ಅವರವರ ಅಭಿರುಚಿ

ಯಂತೆಯೇ ಅವರವರಲ್ಲಿರುವ ಪಾಂಡಿತ್ಯ-ಮನನ-ಚಿಂತನಗಳ ವಿಷಯವೂ ಆಗಿರುತ್ತದೆ. ಅವರವರ ಆಸಕ್ತಿಯಂತೆಯೇ ಇರುವುದು ಯೋಗ್ಯವಾದುದಾಗಿದೆ. ಸಂಶೋಧನೆ ಯೆನ್ನುವುದು ಬಲವಂತದಿಂದ ನಡೆಯುವ ಕೆಲಸವಲ್ಲ, ಹಾಗೆ ಆಗಲೂಬಾರದು. ವಿಷಯದ ಆಯ್ಕೆಯಲ್ಲಿ ಸಂಶೋಧಕನ ಆಸಕ್ತಿಗೇ ಮೊದಲ ಸ್ಥಾನ ಕೊಡಬೇಕು.

ಸಂಶೋಧಕನಿಗೆ ಇರಬೇಕಾದ ಇನ್ನೊಂದು ಅರ್ಹತೆಯೆಂದರೆ ಕುತೂಹಲವನ್ನು ಬೆಳಸಿಕೊಳ್ಳುವುದು. ಒಂದು ವಿಚಾರದ ಬಗೆಗೆ ಕುತೂಹಲವಿದ್ದಲ್ಲಿ ಆ ವಿಚಾರದ ಬಗೆಗೆ ಹೆಚ್ಚು ಹೆಚ್ಚು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಅವನಿಗೆ ಕುತೂಹಲವಿಲ್ಲ ದಿದ್ದರೆ ಸಂಶೋಧನೆಯ ಮೊದಲ ಮೆಟ್ಟಲನ್ನು ಏರಲು ಅನರ್ಹನಾಗುತ್ತಾನೆ. ಕುತೂ ಹಲಗಳೇ ಸಾಮಾನ್ಯವಾಗಿ ಪ್ರಶ್ನೆಯ ರೂಪದಲ್ಲಿರುತ್ತವೆ. ಈ ಪ್ರಶ್ನೆಗಳಿಗೆ ಉತ್ತರ ವನ್ನು ಕಂಡುಕೊಳ್ಳುವ ಪ್ರವೃತ್ತಿಯಿರಬೇಕು. ಸಮಸ್ಯೆಗಳಿದ್ದರೆ ಮಾತ್ರವೇ ಪರಿ ಹರಿಸಿಕೊಳ್ಳಲು ಸಾಧ್ಯ. ಕೇವಲ ಕುತೂಹಲವಷ್ಟೇ ಸಾಲದು.

ಸದಾ ಪರಿಶ್ರಮವನ್ನು ಹೊಂದುವ ಪ್ರವೃತ್ತಿ ಸಂಶೋಧಕನಿಗಿರಬೇಕು. ವಿಷಯ ಸಂಗ್ರಹಣೆಯ ಕೆಲಸದಲ್ಲಿ ಸ್ವಲ್ಪವೂ ಆಲಸಿಯಾಗಬಾರದು. ಎಷ್ಟೇ ಕಷ್ಟ ವಿದ್ದರೂ ಅವನ್ನು ಧೈರ್ಯದಿಂದ ಎದುರಿಸಿ ತನ್ನ ಕುತೂಹಲಕ್ಕೆ ತಕ್ಕ ಉತ್ತರಗಳನ್ನು ಮಾಹಿತಿಗಳನ್ನೂ ಪಡೆದೇ ತೀರುವೆನೆಂಬ ಹಟವೂ ಇರಬೇಕಾಗುತ್ತದೆ. ಸಾಹಿತ್ಯ ದಲ್ಲಿಯೇ ಆಗಲಿ, ಜಾನಪದದಲ್ಲಿಯೇ ಆಗಲಿ ವಿಷಯ ಸಂಗ್ರಹಣೆಗೆ ಕೆಲವೊಮ್ಮೆ ಕ್ಷೇತ್ರಕಾರ್ಯ ನಡೆಸಬೇಕಾಗಿ ಬರುತ್ತದೆ. ಹಾಗೆ ಮಾಡುವಾಗ ಉದಾಸೀನತೆಯಿಂದಿ ದ್ದರೆ ಸಂಶೋಧಕನ ಉದ್ದೇಶ ನೆರವೇರುವುದಿಲ್ಲ. ಇದಕ್ಕೆ ಸದಾ ಪರಿಶ್ರಮವನ್ನು ಹೊಂದಲು ಸಿದ್ಧನಾಗಿರಬೇಕು. ನಮ್ಮ ಗುರಿಯ ಮುಂದೆ ದೈಹಿಕ ಹಾಗೂ ಮಾನಸಿಕ ಸುಖಗಳು ಇಲ್ಲಿ ಗೌಣವಾಗಿರಬೇಕು. ಸಂಶೋಧನಾ ಕಾರ್ಯವೆಂಬುದು ನಿರಂತರವೆಂಬು ದನ್ನು ಇಲ್ಲಿ ಗಮನಿಸಬೇಕಾಗುತ್ತದೆ. ವಿಷಯ ಸಂಗ್ರಹಣಾ ದೃಷ್ಟಿಯಿಂದ ಸಂಶೋಧ ಕನ ಪಾತ್ರ ಹಿರಿದು. ಒಂದು ರೀತಿಯಲ್ಲಿ ಸಂಶೋಧಿತ ವಿಷಯಗಳ ಗುಣ-ದೋಷ ಗಳಿಗೆ ಸಂಶೋಧಕನೇ ಜವಾಬ್ದಾರನಾಗಿರುತ್ತಾನೆ.

ಸಂಶೋಧಕನಿಗಿರಬೇಕಾದ ಮತ್ತೊಂದು ಗುಣ ಮುಕ್ತವಾದ ಮನಸ್ಸು. ಸತ್ಯದ ಬಗೆಗೆ ನಿಷ್ಠುರವಾದದನ್ನಾದರೂ ಸ್ವೀಕರಿಸಲು ಇದು ಅಗತ್ಯ. ಹಾಗೆಯೇ ವಸ್ತು ಸ್ಥಿತಿಯನ್ನು ಹೇಳುವಾಗಲೂ ಯಾವುದೇ ರೀತಿಯ ಮುಚ್ಚುಮರೆಯ ಅಗತ್ಯವಿಲ್ಲ. ನಿಜಸ್ಥಿತಿಯನ್ನು ಹೇಳುವಾಗಲೂ, ಕೇಳುವಾಗಲೂ ಯಾವುದೇ ರೀತಿಯ ಪೂರ್ವ ಸಂಕಲ್ಪಗಳಿರಬಾರದು. ತಾನು ಆಯ್ದುಕೊಳ್ಳುವ ವಿಷಯದ ಬಗೆಗೆ ಸಾಧ್ಯವಾದ ಮಾಹಿತಿಯನ್ನು ಮಾಡಿಕೊಳ್ಳುವುದಕ್ಕೂ ಇದು ಪೂರಕವಾಗುತ್ತದೆ.

## 8.3 ಸಂಶೋಧಕನಿಗೆ ಪ್ರಾಥಮಿಕ ದೃಷ್ಟಿ ಮತ್ತು ವ್ಯಾಪ್ತಿ :

ಸಂಶೋಧನೆಗೆ ಹೊರಟಮೇಲೆ ವೈಯುಕ್ತಿಕ ದೃಷ್ಟಿ ಸಲ್ಲದು. ಸಂಕುಚಿತ ಮನೋಭಾವದ ಸಂಶೋಧನೆಗೆ ಅರ್ಥವಿರುವುದಿಲ್ಲ. ಅದು ಸಾರ್ವಜನಿಕ ಲೋಕ ರೂಢಿಯದಾಗಿರಬೇಕು. ಸಂಶೋಧನೆಯಲ್ಲಿ ವಸ್ತುವಿಗೆ ಬೆಲೆಯೇ ಹೊರತು, ವ್ಯಕ್ತಿಗಲ್ಲ ಎಂಬುದು ಮುಖ್ಯ. ಸಂಶೋಧನೆಯ ಫಲಕ್ಕೆ ಸಾರ್ವಕಾಲಿಕ ಮೌಲ್ಯವಿರುತ್ತದೆ ಎಂಬ ಅರಿವು ಸದಾ ಇರಬೇಕು. ಕಾಲಕ್ರಮದಲ್ಲಿ ಒಂದು ವಿಷಯದ ವಿಚಾರದಲ್ಲಿನ ಅನಿಸಿಕೆಗಳು, ಬದಲಾವಣೆ ಹೊಂದಬಹುದಾದರೂ ಅದರ ಮೂಲಾಂಶಗಳು ಬದಲಾಗದೆ ಉಳಿಯುವಂಥದ್ದು. ಇಂದು ನಡೆಸುವ ಸಂಶೋಧನೆಯ ವಿಷಯವನ್ನು ಮುಂದೆಯೂ ಇನ್ನೊಬ್ಬರು ಸಮಸ್ಯೆಯನ್ನಾಗಿ ಆರಿಸಿಕೊಳ್ಳಬಹುದು. ಬೇರೆ ಬೇರೆ ಅನಿಸಿಕೆಗಳು, ಆಧಾರಗಳು ವ್ಯಕ್ತವಾಗುತ್ತಲೇ ಇರಬಹುದು. ಆದರೆ ಮೂಲ ವಿಷಯ ಮಾತ್ರ ಒಂದೇ ಆಗಿರುವುದು, ಹೀಗೆ ನಿರಂತರವಾಗಿ ಬರುತ್ತಿರುವ ವಿಚಾರಗಳು ಸಾರ್ವಕಾಲಿಕತೆಯನ್ನು ಉಳಿಸಿಕೊಂಡರೆ ಮಾತ್ರ ಸಂಶೋಧನೆಗೆ ಮೌಲ್ಯವಿರುತ್ತದೆ.

ಸಂಶೋಧನಾ ಕ್ಷೇತ್ರದಲ್ಲಿ ಕೈಗೊಂಡ ಕಾರ್ಯಗಳ ವರದಿಯೂ ಕೂಡಾ ಸಂಶೋಧನೆಯೆನ್ನಿಸಿಕೊಳ್ಳುತ್ತದೆ.

ಸಂಶೋಧನೆಯೆಂದರೆ ಅವಿರತ ಶ್ರಮದ, ಅಭ್ಯಾಸದ, ಅಧ್ಯಯನದ ಫಲವೇ ಹೊರತು ಅದೃಷ್ಟದ ಫಲವಲ್ಲ. ತಮಗೊದಗಿದ ಆಧಾರ, ಮಾಹಿತಿಗಳ ಮೇಲೆ ನಡೆಸಿದ ಚಿಂತನ ಅಧ್ಯಯನಗಳಿಂದ ಬರಬೇಕಾದದ್ದು.

ಹಾಗೆಯೇ ಸಂಶೋಧಕನಿಗೆ ತಾನು ಹೋಗುತ್ತಿರುವ ದಾರಿಯೇ ಸರ್ವಥಾ ಯೋಗ್ಯವಾದುದೆಂಬ ಭಾವನೆಯೂ ಇರಬಾರದು. ಆತ ಯಾವಾಗಲೂ ಜಿಜ್ಞಾಸುವಾಗಿರಬೇಕು. ತಾನು ತಿಳಿದುದು ಅಲ್ಪವಾದುದೆಂಬ ಅರಿವು ಸದಾ ಇರಬೇಕು. ತನ್ನ ಸಂಶೋಧನಾ ಫಲದ ಬಗ್ಗೆ ಬೀಗಿಕೊಳ್ಳುವುದೂ ಯೋಗ್ಯವಲ್ಲ. ಅದರ ಬಗೆಗೆ ಇನ್ನಷ್ಟು ತಿಳಿದುಕೊಳ್ಳೋಣವೆಂಬ ಮನೋಭಾವ ಸದಾ ಎಚ್ಚರವಾಗಿರಬೇಕು. ಭಾವೋದ್ವೇಗದಿಂದಾಗಿ ಅವಸರದ ತೀರ್ಮಾನಗಳನ್ನು ಕೈಗೊಳ್ಳುವುದು ಇದರಿಂದಾಗಿ ತಪ್ಪುತ್ತದೆ. ಇದು ಸಂಶೋಧನೆಯ ಆರೋಗ್ಯವನ್ನು ಕಾಪಾಡುತ್ತದೆ. ತನ್ನ ತಪ್ಪುಗಳನ್ನು ಯಾರಾದರೂ ತೋರಿಸಿಕೊಟ್ಟರೆ ಕೃತಜ್ಞತೆಯಿಂದ ಸ್ವೀಕರಿಸಿಕೊಳ್ಳಬೇಕು ಹೊರತಾಗಿ ಅಭಿಮಾನ ಭಂಗವೆಂದು ತಿಳಿದುಕೊಳ್ಳಬಾರದು. ತನ್ನ ಶ್ರಮಕ್ಕೆ ತಕ್ಕ ಪ್ರತಿಫಲವು ದೊರೆಯದೆ ಹೋಗುವಂಥಾ ಸಂದರ್ಭವೇ ಬಂದಾಗಲೂ ತಾಳ್ಮೆಯನ್ನು ಕಳೆದುಕೊಳ್ಳಬಾರದು. ಇದು ತನ್ನ ಬೆಳವಣಿಗೆಯ ದೃಷ್ಟಿಯಿಂದ ಒಳ್ಳೆಯವೇ

ಆಯಿತೆಂದು ತಾಳ್ಮೆಯಿಂದ ಸ್ವೀಕರಿಸಿಕೊಂಡು ಮುನ್ನಡೆಯಬೇಕು. ಉದ್ವಿಗ್ನತೆಯನ್ನು ತೊಲಗಿಸುತ್ತಾ, ಅವಸರದ ತೀರ್ಮಾನಕ್ಕೆ ಬರದಂತೆ ನೋಡುತ್ತಾ, ಜಿಜ್ಞಾಸು ಪ್ರವೃತ್ತಿಯನ್ನು ಬೆಳೆಸುತ್ತಾ, ಕಂಡುದನ್ನು ಕಂಡಂತೆ ಹೇಳುವ ನಿರ್ಭಿಡೆತನಗಳನ್ನು ಮೈಗೂಡಿಸಿಕೊಳ್ಳಬೇಕಾದುದು ಸಂಶೋಧಕನಲ್ಲಿರಬೇಕಾದ ಮುಖ್ಯ ಗುಣಗಳು.

ಸಂಶೋಧನಾ ಕಾರ್ಯದಲ್ಲಿ ಸಂಶೋಧಕ ಪೂರ್ತಿ ಪಕ್ಷಪಾತರಹಿತನಾಗಿರಬೇಕು. ಆತ ಯಾವುದೇ ವ್ಯಕ್ತಿಯ ಆಕರ್ಷಣೆಗೆ ಅಥವಾ ದಾಕ್ಷಿಣ್ಯಕ್ಕೆ ಬಲಿಯಾಗಬಾರದು. ವಿದ್ವಾಂಸರ ಮಾತುಗಳನ್ನು ಗಮನಿಸುವಾಗ ಅವರ ಮಾತುಗಳಲ್ಲಿಡಗಿರುವ ಸತ್ಯಕ್ಕೆ ಬೆಲೆ ಕೊಡಬೇಕು ಹೊರತಾಗಿ ಅವರ ವ್ಯಕ್ತಿತ್ವಕ್ಕಲ್ಲ. ವಸ್ತುನಿಷ್ಠ ದೃಷ್ಟಿಯನ್ನು ಸಂಶೋಧಕ ಬೆಳೆಸಿಕೊಳ್ಳಬೇಕು. ತನ್ನ ವೈಯುಕ್ತಿಕ ದೃಷ್ಟಿಕೋನಗಳು ಸಂಶೋಧಕನಿಗೆ ಮಾರಕವಾಗುವಂತಿರಬೇಕು. ಸತ್ಯಸಾಕ್ಷಾತ್ಕಾರವೇ ಮೂಲೋದ್ದೇಶವಾಗಿರಬೇಕು. ಅಂತೆಯೇ ಪ್ರತಿಭೆ, ಕಲ್ಪನೆಗಳ ಸುಳಿಗೆ ಸಿಕ್ಕಿ ಭಾವಾವೇಷಕ್ಕೆ ಒಳಗಾಗಬಾರದು. ಸಂಶೋಧಕ ತನ್ನಿಂದ ಬೇರೆಯಾದ ಹೊಸ ವಸ್ತುವೊಂದರ ಪ್ರಕಟಣೆಗೆ ಶ್ರಮಿಸಬೇಕು. ಈ ದಿಶೆಯಲ್ಲಿ ಆತನ ಪ್ರತಿಭೆ, ಕಲ್ಪನೆಗಳು ಹಿನ್ನೆಲೆಯಲ್ಲಿ ಮಾತ್ರ ಗೋಚರಿಸುವಂತಿರಬೇಕು.

ಸಂಶೋಧಕನಿಗೆ ಸತ್ಯವನ್ನು ಬಯಲುಮಾಡುವಲ್ಲಿ ಯಾವುದೇ ರೀತಿಯ ಅಂಜಿಕೆಯಿರಬಾರದು. ತನಗೊದಗಿದ ಆಧಾರಗಳ ಮೇಲೆ ಹೇಳಿಕೆಗಳನ್ನು ನೀಡುವಾಗ ಎಚ್ಚರಿಕೆಯಿದ್ದು ಜವಾಬ್ದಾರಿ ಹೊಂದಿರಬೇಕು. ಅದರ ಬಗೆಗೆ ಬರಬಹುದಾದ ಪ್ರತಿಕ್ರಿಯೆಗಳ ಬಗೆಗೆ ಆಸಕ್ತನಾಗಿರಬೇಕು. ತಪ್ಪಿದ್ದಲ್ಲಿ ಸರಿಪಡಿಸಿಕೊಳ್ಳುವ ಹೃದಯವಂತಿಕೆ ಇರಬೇಕು. ಸಂಶೋಧಕ ಕೀರ್ತಿಗಾಗಿ ಸಂಶೋಧನೆ ನಡೆಸಬಾರದೆಂದು ಈ ಹಿಂದೆಯೇ ಹೇಳಿದೆ. ಪ್ರಶಂಸೆಗಾಗಿ ಹಾತೊರೆದರೆ ಆತನ ಬೆಳವಣಿಗೆಗೆ ಕೇಡು ಎಂಬುದನ್ನು ಚೆನ್ನಾಗಿ ಅರ್ಥಮಾಡಿಕೊಂಡಿರಬೇಕು.

### 3.4 ಸಂಶೋಧಕ ಮಾರ್ಗದರ್ಶಿ ಸಂಬಂಧಗಳು :

ಸಂಶೋಧಕನಿಗೆ ಕೆಲವೊಂದು ಅರ್ಹತೆಗಳಿರುವಂತೆ ಅಥವಾ ಕೆಲವೊಂದು ಮುಖ್ಯ ಗುಣಗಳನ್ನು ರೂಢಿಸಿಕೊಳ್ಳಬೇಕಾಗಿರುವಂತೆ ಆತನ ಮಾರ್ಗದರ್ಶಕನೂ ಯೋಗ್ಯನಾಗಿರಬೇಕು. ಮಾರ್ಗದರ್ಶನದಲ್ಲಿ ಪಡೆಯಬಹುದಾದ ಮಾಹಿತಿಗಳು ಹಲವು. ಸಂಶೋಧಕನಿಗೆ ಯೋಗ್ಯವಾದ ಹಾಗೂ ಸೂಕ್ತವಾದ ದಾರಿಯನ್ನು ಹಾಕಿಕೊಡುವಲ್ಲಿ ಮಾರ್ಗದರ್ಶಕನ ಪಾತ್ರ ಹಿರಿದು. ಹಾಗಾದುದರಿಂದ ಮಾರ್ಗದರ್ಶಕನಿಗೂ ಸಂಶೋಧಕನ ಸಂಶೋಧನಾ ಕ್ಷೇತ್ರದ ಕುರಿತಾಗಿ ಸ್ಪಷ್ಟವಾದ ಅರಿವು ಇರಬೇಕಾಗುತ್ತದೆ. ಇಲ್ಲವಾದಲ್ಲಿ ಸಂಶೋಧಕನಿಗೆ ಸರಿಯಾದ ಮಾರ್ಗದರ್ಶನ ಸಿಗದೇ ಹೋಗ

ಬಹುದು. ಮಾರ್ಗದರ್ಶಕನ ನೇತೃತ್ವದಲ್ಲೇ ಸಂಶೋಧಕನು ತನ್ನ ಸಂಶೋಧನೆಯನ್ನು ನಡೆಸುವುದು ಇಂದಿನ ಸಂಶೋಧನಾ ಕ್ರಮವಾಗಿದೆ. ವಿಶ್ವವಿದ್ಯಾಲಯಗಳ ಮಟ್ಟದಲ್ಲೂ ಇದು ಸಾರ್ವತ್ರಿಕವಾಗಿದೆ. ಮಾರ್ಗದರ್ಶಕನಾಗಬೇಕಿದ್ದರೆ ಆತನಿಗೂ ಕೆಲವೊಂದು ಯೋಗ್ಯತೆಗಳಿರಬೇಕೆಂಬ ನಿಯಮವಿದೆ. ಗುರುಮುಖೇನ ಕಲಿತ ವಿದ್ಯೆ ಎಂದಿಗೂ ಯೋಗ್ಯವಾದುದು ಎಂಬುದನ್ನೇ ಇಲ್ಲಿಯೂ ನೋಡಬಹುದು.

ಕೆಲವೊಮ್ಮೆ ಮಾರ್ಗದರ್ಶಕನ ಅನುಭವದ ಪರಿಧಿಗೂ ಆತನ ನೇತೃತ್ವದಲ್ಲಿ ನಡೆಸುವ ಸಂಶೋಧನಾ ಕ್ಷೇತ್ರಕ್ಕೂ ಅರ್ಥಾರ್ಥ ಸಂಬಂಧವಿಲ್ಲದಿರುವುದೂ ಇದೆ. ಇಂಥಹ ಸಂದರ್ಭಗಳಲ್ಲಿ ತನಗೆ ಸೂಕ್ತ ಹಾಗೂ ಯೋಗ್ಯವಾದ ಗುರುಗಳನ್ನು ಹುಡುಕುವುದೇ ಆರೋಗ್ಯಕರ. ಮಾರ್ಗದರ್ಶಿಯೂ ಸಂಶೋಧಕನೂ ಪರಸ್ಪರ ವಿಚಾರ ವಿನಿಮಯಗಳಿಂದ ಸಂಶೋಧನ ಕ್ಷೇತ್ರವನ್ನು ಗುರುತು ಹಚ್ಚಿಕೊಂಡು ಕಾರ್ಯಪ್ರವೃತ್ತನಾಗಬೇಕು. ಆಗಲೇ ಆ ಸಂಶೋಧನ ಕ್ಷೇತ್ರಕ್ಕೆ ಜಯವಾದೀತು. ಮಾರ್ಗದರ್ಶಿಯಾಗಲೀ ಸಂಶೋಧಕನಾಗಲೀ ಒಮ್ಮತದಿಂದ ನಿಸ್ಪೃಹ ಚರ್ಚೆ, ಮಂಥನಗಳಿಂದ ಕಾರ್ಯ ಮುಂದುವರೆಸಿದರೆ ಅಂತಹ ಸಂಶೋಧನೆಗೆ ಅರ್ಥ ಬರುತ್ತದೆ. ಇಲ್ಲಿ ಸಂಶೋಧಕನಾಗಲೀ, ಮಾರ್ಗದರ್ಶಿಯಾಗಲೀ ಯಾರೊಬ್ಬನೂ ಭಿನ್ನಾಭಿಪ್ರಾಯದಿಂದ ಇರಬಾರದು. ಯಾರೊಬ್ಬರೂ ಸ್ವಪ್ರತಿಷ್ಠೆಗಾಗಿ ಹೋರಾಡಿದರೆ ಸಂಶೋಧನಾ ಕ್ಷೇತ್ರಕ್ಕೆ ಕೇಡುಂಟಾದೀತೆನ್ನುವುದರಲ್ಲಿ ಸಂದೇಹವೇ ಇಲ್ಲ. ಆದುದರಿಂದ ಮಾರ್ಗದರ್ಶಕನೂ ಸಂಶೋಧಕನೂ ಇಬ್ಬರೂ ಜವಾಬ್ದಾರಿಯುಳ್ಳವರೇ ಆಗಿರುತ್ತಾರೆ. ಸಮರ್ಥನಾದ ಮಾರ್ಗದರ್ಶಿಯೊಬ್ಬನು ಸಿಕ್ಕಿದನೆಂದಾದರೆ, ಸಂಶೋಧಕನಿಗೆ ತನ್ನ ದಾರಿಯನ್ನು ಕಂಡುಕೊಳ್ಳಲು ಸುಗಮವಾದಂತಾಗುತ್ತದೆ.

## 8.5 ಸಂಶೋಧಕನಿಗೆ ಸಂಶೋಧನೆಯ ಬಗೆಗಿರಬೇಕಾದ ಕಲ್ಪನೆ :

ಸಂಶೋಧಕನಿಗೆ ತಾನು ನಡೆಸಿದ ಸಂಶೋಧನೆಯ ಬಗೆಗೆ ಸರಿಯಾದ ತಿಳುವಳಿಕೆ, ವಿಶ್ವಾಸ ಇರಬೇಕು. ವಿಷಯ ಸಂಗ್ರಹಣೆಯಲ್ಲಿ ಸ್ಪಷ್ಟ ಅರಿವು ಇರಬೇಕು. ಮುಂದೆ ತಾನು ಬರೆಯುವ ವಿಚಾರಗಳನ್ನು ಕುರಿತು ಸಮಗ್ರ ದೃಷ್ಟಿ ಇರಬೇಕು. ಸಾಹಿತ್ಯದಲ್ಲಿ ತಾನೆಷ್ಟು ಪುಟ ಬರೆದಿದ್ದೇನೆಂಬುದು ಸಂಶೋಧನೆಯ ಮೌಲ್ಯಮಾಪನದ ಮಾನವಾಗಿರುವುದಿಲ್ಲ. ಸಂಶೋಧನೆಯಲ್ಲಿ ವಿಷಯವನ್ನು ಹೇಗೆ ಹೇಳಲಾಗಿದೆ, ಏನನ್ನು ನಿರೂಪಿಸಿದೆ ಎನ್ನುವುದೇ ಮೌಲ್ಯವನ್ನು ರೂಪಿಸುವ ಮಾಪನವಾಗುತ್ತದೆ. ಕೆಲವೊಮ್ಮೆ ವಿಚಾರಗಳನ್ನು ಮಂಡಿಸುವಾಗ ಸರಳವಾಗಿ ಹೇಳಬಹುದು. ಇನ್ನು ಕೆಲವೊಮ್ಮೆ ವಿವರಣೆಗಳನ್ನು ನೀಡಬೇಕಾಗಿ ಬರಬಹುದು. ಆ ಸಂದರ್ಭದಲ್ಲಿ ಅಗತ್ಯವಾಗಿ ವಿಸ್ತರಿಸಲೇಬೇಕಾಗುತ್ತದೆ. ತನ್ನ ಭಾಷಾ ಪ್ರೌಢಿಮೆಯನ್ನೋ, ಶೈಲಿ ವಿನ್ಯಾಸ

ವನ್ನೇ ಮೆರೆಸಲು ಸಂಶೋಧನ ಪ್ರಬಂಧವು ಜಾಗವಾಗಬಾರದು. ಹೇಳಬೇಕಾದುದನ್ನು ಸರಳವಾಗಿ ಸ್ಪಷ್ಟವಾಗಿ ಹಾಗೂ ನೇರವಾಗಿ ಹೇಳುವುದು ಮುಖ್ಯ. ಇದುವೇ ಅದರ ಮೌಲ್ಯಮಾಪನದ ಅಳತೆಗೋಲಾಗುತ್ತದೆ. ಇಂತಹ ಭಾಷಾ ಶುದ್ಧತೆ, ಸ್ಪಷ್ಟತೆ, ಸರಳತೆ, ಮೊದಲಾದ ಗುಣಗಳನ್ನು ಸಂಶೋಧಕನು ಮೈಗೂಡಿಸಿಕೊಂಡಿರಬೇಕಾಗುತ್ತದೆ.

## 8.6 ಸಂಶೋಧಕನಿಗಿರಬೇಕಾದ ಮೂಲಭೂತ ಗುಣಗಳು :

ಸಂಶೋಧನೆ–ಸಂಶೋಧಕ–ಮಾರ್ಗದರ್ಶಿ ಇವುಗಳ ಹಿನ್ನೆಲೆಯಲ್ಲಿ ಸಂಶೋಧಕನ ಮೂಲಭೂತ ಅರ್ಹತೆಗಳನ್ನು ಹೀಗೆ ಪಟ್ಟಿ ಮಾಡಬಹುದು.

ಅ) ಸಂಶೋಧಕ ಸ್ವಾಭಾವಿಕವಾಗಿಯೇ ಸತ್ಯಸಂಧನಾಗಿರಬೇಕು. ಇದಕ್ಕೆ ಮೂಲತಃ ತನಗೆ ತಾನೇ ಸತ್ಯವಂತನಾಗಿರಬೇಕು.

ಅ) ಚುರುಕು ಬುದ್ಧಿಯುಳ್ಳವನಾಗಿರಬೇಕು.

ಇ) ವೈಜ್ಞಾನಿಕ ದೃಷ್ಟಿಕೋನಗಳಿಂದ ವಿಷಯ ಪರಿಶೀಲನೆ ನಡೆಸುವ ಸಾಮರ್ಥ್ಯವನ್ನು ಹೊಂದಿರಬೇಕು.

ಈ) ತಾನು ನೀಡುವ ಹೇಳಿಕೆಗಳ ಬಗ್ಗೆ ಪ್ರಜ್ಞಾವಂತನೂ, ಜವಾಬ್ದಾರಿಯುಳ್ಳವನೂ ಆಗಿರಬೇಕು.

ಉ) ಕ್ಷೇತ್ರದಲ್ಲಿ, ವಿದ್ವಾಂಸರಲ್ಲಿ ಸಮಯಪ್ರಜ್ಞೆಯನ್ನು ಅರಿತು ನಡೆಯುವಂತಹವನಾಗಿರಬೇಕು.

ಅಲ್ಲದೆ ಈಗಾಗಲೇ ತಿಳಿಸಿರುವಂತೆ ನಿಸ್ಪೃಹ, ನಿರ್ಭೀತಿಯ ಮನೋಭಾವವನ್ನು ಹೊಂದಿರಬೇಕು. ಸಂಶೋಧಕ ಸಂಶೋಧನಾ ಕ್ಷೇತ್ರವನ್ನು ಹೊಕ್ಕಂತೆಲ್ಲಾ ತನ್ನನ್ನು ತಾನೇ ವಿಶ್ಲೇಷಣೆ ನಡೆಸಿಕೊಳ್ಳುವಂತಿರಬೇಕು. ಸರಿಯಾದ ಅರ್ಥದಲ್ಲಿ ಸಂಶೋಧಕನಿಗೆ–ತನಗೆಷ್ಟು ಗೊತ್ತಿದೆ, ತಾನೇನು ಎಂಬುದು ಸಂಶೋಧನೆ ನಡೆಸುವಂತೆ ತಿಳಿಯುತ್ತಾ ಹೋಗುತ್ತದೆ. ಇದು ಸಂಶೋಧನೆಯ ಇನ್ನೊಂದು ಗುರಿಯೂ ಆಗುತ್ತದೆ. ತಾನು ತಿಳಿದುಕೊಳ್ಳುವುದರೊಂದಿಗೆ ಇನ್ನೊಬ್ಬರಿಗೂ ತಿಳಿಯಪಡಿಸುವುದು ಸಂಶೋಧಕನು ಕಂಡುಕೊಳ್ಳುವ ಆತ್ಮತೃಪ್ತಿಯೂ ಆಗುತ್ತದೆ.

# ೯. ಗ್ರಂಥಾಲಯ – ಸಂಶೋಧಕ

## 9.1 ಮುನ್ನುಡಿ :

ಸಂಶೋಧಕನ ನೆಲೆ ಗ್ರಂಥಾಲಯ – ಯಾವ ಸಂಶೋಧಕನೇ ಆಗಲಿ ತಾನು ಆರಿಸಿಕೊಳ್ಳುವ ವಿಷಯಗಳಿಗೆ ಬೇರನ್ನು ಹುಡುಕುವುದು ಗ್ರಂಥಗಳಲ್ಲಿ. ಸಂಶೋಧನೆಯ ಸತ್ವ ಅಡಗಿರುವುದು, ಸತ್ಯವಾದ ಘಟನೆಗಳ ಪ್ರಾಮಾಣಿಕ ನಿರೂಪಣೆಯಲ್ಲಿ. ಇದಕ್ಕೆ ಪೂರಕವಾಗಿ ಸಂಶೋಧಕ ಆಧಾರಗಳನ್ನು ಸಂಬಂಧಿಸಿದ ಗ್ರಂಥಗಳಿಂದ ಮೊದಲಿಗೆ ಕಂಡುಕೊಳ್ಳುತ್ತಾನೆ. ಮೌಖಿಕ ಆಧಾರಕ್ಕಿಂತ, ಗ್ರಾಂಥಿಕವಾದ, ದಾಖಲಿಸಲ್ಪಟ್ಟ ಆಧಾರಕ್ಕೆ ಮೌಲ್ಯ ಹೆಚ್ಚು. ಮೌಖಿಕವಾಗಿ ಸಂಗ್ರಹಿಸುವ ವಿಚಾರಗಳಲ್ಲಿ, ವೈಯುಕ್ತಿಕವಾದ, ಏಕಪಕ್ಷೀಯವಾದ ಅರ್ಥವಿರಬಹುದು. ಆದರೆ ಗ್ರಾಂಥಿಕವಾದ ಆಧಾರಗಳಲ್ಲಿ ಹಲವಾರು ಸಾಂದರ್ಭಿಕ ಅಭಿಪ್ರಾಯಗಳ, ಚಿಂತನೆಯ ಮೌಲಿಕವಾದ ಹೇಳಿಕೆಗಳಿರುವುದು. ಈ ನಿಟ್ಟಿನಲ್ಲಿ ಸಂಶೋಧಕನಿಗೆ ಗ್ರಂಥಾಲಯಗಳು ಪ್ರಾಥಮಿಕವಾಗಿ ವಿಷಯ ಸಂಗ್ರಹಣೆಯ, ವಿಷಯ ಸ್ಪಷ್ಟತೆಯ ಕೇಂದ್ರವಾಗಿದೆ.

## 9.2 ಗ್ರಂಥಾಲಯದ ಬಳಕೆ :

ಗ್ರಂಥಾಲಯವನ್ನು ತನ್ನ ಸಂಶೋಧನೆಯಲ್ಲಿ ಪಾತ್ರವಾಗಿಸಿಕೊಳ್ಳುವ ಸಂಶೋಧಕ ತನ್ನ ವಿಷಯದ ಬಗೆಗೆ ಸ್ಪಷ್ಟವಾದ ತಿಳುವಳಿಕೆಯನ್ನು ಮೂಡಿಸಿಕೊಂಡಿರಬೇಕು. ಸಂಶೋಧಕನಾದವನು ಮೊದಲಿಗೆ ತನ್ನ ವಿಷಯಕ್ಕೆ ಸಂಬಂಧಿಸಿದಂತೆ ಒಂದು ಚೌಕಟ್ಟನ್ನು ರೂಪಿಸಿಕೊಂಡು ಬಳಿಕ ವಿವಿಧ ಹಂತಗಳಲ್ಲಿ ವಿಷಯ ಸಂಗ್ರಹಣೆ ಮಾಡ ಬೇಕಾಗುವುದು, ಸಂಶೋಧಕ ತನ್ನ ವಿಷಯಕ್ಕೆ ಸಂಬಂಧಿಸಿದಂತೆ ಶಾಸನಗಳು, ಸಾಹಿತ್ಯ ಚರಿತ್ರೆಗಳು, ಕವಿ ಚರಿತ್ರೆಗಳು, ವಿಮರ್ಶಾ ಗ್ರಂಥಗಳು, ಸಹಾಯಕ ಗ್ರಂಥಗಳು, ನಿಬಂಧಗಳು, ಲೇಖನಗಳು, ನಿಯತಕಾಲಿಕೆ, ಪತ್ರಿಕೆಗಳು ಮೊದಲಾದವುಗಳಿಂದ ಉದ್ಧೃತಗಳ ಪಟ್ಟಿಯೊಂದನ್ನು ತಯಾರಿಸಿಕೊಳ್ಳಬೇಕು. ಲಭ್ಯವಿರುವ ಗ್ರಂಥಗಳನ್ನೆಲ್ಲ ಪರಿಶೀಲನೆ ಮಾಡಿದ ಬಳಿಕ, ಅಲಭ್ಯವಾದ ಕೃತಿಗಳ ಬಗೆಗೆ, ತಾನು ಅವಲೋಕಿಸಿದ ಗ್ರಂಥಗಳಲ್ಲಿ ವಿವರಣೆಯಿದ್ದರೆ ಅದರ ಅಂಶವನ್ನು ಗುರುತಿಸಿಟ್ಟುಕೊಳ್ಳಬೇಕು. ಸಾಹಿತ್ಯ ಸಂಶೋಧನೆಯಲ್ಲಿಂತೂ ಗ್ರಂಥಾಲಯದ್ದೇ ಮಹತ್ವದ ಪಾತ್ರ. ಗ್ರಂಥಾಲಯಗಳಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸಿಟ್ಟಿರುವ ವಿಭಾಗವೂ ಇರುತ್ತದೆ. ಅಗತ್ಯವಾದಲ್ಲಿ ಸಂಗ್ರಹಿಸಲಾದ ಹಸ್ತಪ್ರತಿಗಳ ವರ್ಣನಾ ಸೂಚಿಗಳನ್ನು ನೋಡಿಕೊಂಡು

ವಿಚಾರಗಳನ್ನು ಗುರುತುಮಾಡಿಕೊಳ್ಳಬಹುದು. ಉದಾಹರಣೆಗೆ ಯಕ್ಷಗಾನ ಕವಿಗಳು ಹಾಗೂ ಕೃತಿಗಳು, ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯದ ಹಸ್ತಪ್ರತಿಗಳ ವಿಭಾಗದಲ್ಲಿ ಹೇರಳವಾಗಿದೆ. ಯಕ್ಷಗಾನ ಕವಿಗಳು ಮತ್ತು ಸಾಹಿತ್ಯದ ಬಗೆಗೆ ಅಧ್ಯಯನ ನಡೆಸುವವರು ಇದನ್ನು ನೋಡಿದರೆ ಒಳ್ಳೆಯದು.

ಹಾಗೆಯೇ ಕೆಲವೆಡೆಗಳಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳೂ ಇರುತ್ತವೆ. ಇಂಥ ಕಡೆಗಳಲ್ಲಿ ಅಪರೂಪದ ಹಾಗೂ ಅಪೂರ್ವವಾದ ಹಳೆಯ ಪುಸ್ತಕಗಳ ತಾಡ ವೋಲೆ ಗ್ರಂಥಗಳು ಲಭ್ಯವಿರುತ್ತವೆ. ಮದರಾಸು, ಬೊಂಬಾಯಿ, ಕಲ್ಕತ್ತ ಮೊದಲಾದ ಹಳೆಯ ನಗರಗಳ ಪ್ರಾಚ್ಯವಸ್ತು ಸಂಗ್ರಹಾಲಯ (Archives) ಗಳಲ್ಲಿ ಕನ್ನಡದ ಸಾಹಿತ್ಯ ಕೃತಿಗಳ ಹಳೆಯ ಸಂಗ್ರಹಗಳನ್ನು ನೋಡಬಹುದು. ಸಂಶೋಧಕನು ತಾನು ನಡೆಸುವ ಸಂಶೋಧನೆಯ ಬಗೆಗೆ ಎಷ್ಟು ಕಾಳಜಿಯಿಂದಿರುತ್ತಾನೆಯೋ ಅಂತೆಯೇ ತನ್ನ ಸಂಶೋಧನೆಯ ವ್ಯಾಪ್ತಿಯೊಳಗೆ ಬೇಕಾಗಿರುವ ಗ್ರಂಥಗಳ ಬಗೆಗೂ ಹಾಗೂ ಅವುಗಳು ದೊರಕುವ ಗ್ರಂಥಾಲಯಗಳ ಬಗೆಗೂ ಕಾಳಜಿಯಿಂದಿರಬೇಕು. ಗ್ರಂಥಗಳು ಎಲ್ಲೆಲ್ಲಿ ಲಭ್ಯವಿವೆ ಎಂಬುದನ್ನು ತಿಳಿದುಕೊಳ್ಳುವುದೂ ಒಂದು ರೀತಿಯ ಸಂಶೋಧನೆಯೇ ಆದೀತು. ಯಾವ ಯಾವ ಗ್ರಂಥಾಲಯಗಳಲ್ಲಿ ಎಷ್ಟೆಷ್ಟು ಮಾಹಿತಿಗಳನ್ನು ಸಂಗ್ರಹಿಸಬಹುದು ಎಂಬ ವಿಚಾರದಲ್ಲಿ ಪರಿಪೂರ್ಣವಾದ ಮಾಹಿತಿಗಳನ್ನು ಸಂಶೋಧನಾ ಪೂರ್ವದಲ್ಲಿಯೇ ಮಾಡಿಟ್ಟುಕೊಳ್ಳಬೇಕಾಗುತ್ತದೆ.

ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಪಡೆಯಲು ಅನೇಕ ಸೌಲಭ್ಯಗಳಿರುತ್ತವೆ. ಕ್ರಮಬದ್ಧವಾಗಿ ಜೋಡಿಸಲಾದ ಕ್ಯಾಟಲಾಗು ಇದಕ್ಕೆ ಸಹಕಾರಿಯಾಗುತ್ತದೆ. ವಿಭಾಗ ಕ್ರಮದಲ್ಲಿ ರಚಿಸಲಾದ ಪುಸ್ತಕಗಳು ಬೇಕಾದಾಗ ಬೇಕಾದಂತೆ ಲಭ್ಯವಾಗುವ ರೀತಿಯಲ್ಲಿದ್ದರೆ ಅದುವೇ ಉತ್ತಮ ಗ್ರಂಥಾಲಯವೆನಿಸುತ್ತದೆ. ಸಂಶೋಧಕನಿಗೆ ಇದು ತುಂಬಾ ಸಹಕಾರಿಯಾಗುತ್ತದೆ. ಗ್ರಂಥಗಳನ್ನು ಹುಡುಕುವುದರಲ್ಲಿಯೇ ಸಮಯವು ನಷ್ಟವಾಗಬಾರದು ಎಂಬುದಕ್ಕಾಗಿಯೇ ವ್ಯವಸ್ಥಿತವಾದ ಗ್ರಂಥಾಲಯದ ಮಹತ್ವವನ್ನು ಹೇಳಲಾಗಿದೆ.

## 9.3 ಗ್ರಂಥಾಲಯದಲ್ಲಿ ಗ್ರಂಥಗಳ ಉಪಯೋಗ :

ಸಂಶೋಧಕನಾದವನು ತನ್ನ ವಿಷಯಕ್ಕೆ ಸಂಬಂಧಿಸಿದಂತೆ ವಿದ್ವಾಂಸರಿಂದಾಗಲೀ, ಪುಸ್ತಕಗಳ ವರ್ಣನಾತ್ಮಕ ಸೂಚಿಯಿಂದಲಾಗಲೀ, ತನಗೆ ಬೇಕಾದ ಪಟ್ಟಿಯೊಂದನ್ನು ತಯಾರಿಸಿಕೊಳ್ಳಬೇಕು. ಹಾಗೆ ಮಾಡುವಾಗ ಗ್ರಂಥಗಳ, ನಿಬಂಧಗಳ, ವಿಮರ್ಶಾ ಗ್ರಂಥಗಳ, ಬಿಡಿ ಲೇಖನಗಳ ಪೂರ್ತಿಯಾದ ಮಾಹಿತಿಗಳಿರುವಂಥಾ ಪ್ರತ್ಯೇಕ ಪಟ್ಟಿಯೊಂದನ್ನು ತಯಾರಿಸಿಕೊಳ್ಳುವುದು ಒಳ್ಳೆಯದು. ನಂತರ ಆ ಪಟ್ಟಿಕೆಗಳಿಗನುಗುಣ

ವಾಗಿ ದೊರಕುವ ಮಾಹಿತಿಗಳನ್ನು ಸಂಗ್ರಹಿಸಬಹುದು. ಸಂಶೋಧಕನಿಗೆ ಬೇಕಾದ ಎಲ್ಲ ವಿಚಾರಗಳು ಒಂದೇ ಗ್ರಂಥಾಲಯದಲ್ಲಿ ದೊರಕಬಹುದು ಎಂದು ಹೇಳಲಾಗದು. ಆದುದರಿಂದ ಸಂಶೋಧಕನಾದವನು ತನಗೆ ಸಂಬಂಧಿಸಿದಂತೆ ಎಲ್ಲ ಗ್ರಂಥಾಲಯಗಳ ಸ್ಥಾನ ಹಾಗೂ ಅಲ್ಲಿ ತನಗೆ ದೊರಕಬಹುದಾದ ಮಾಹಿತಿಗಳ ಅರಿವನ್ನು ತಿಳಿದಿರಬೇಕು. ಗ್ರಂಥಾಲಯದಲ್ಲಿ ತನಗೆ ಬೇಕಾಗಿದ್ದಿರಬಹುದಾದ ಉಪಯುಕ್ತ ಅಂಶಗಳ ಸಂಗ್ರಹವಿದೆ ಎಂದು ತಿಳಿದಲ್ಲಿ, ಸಮಯವನ್ನು ಉಳಿಸಲು, ಹಾಗೂ ವ್ಯರ್ಥವಾಗಿ ಹಣ ಖರ್ಚಾಗುವುದನ್ನು ತಪ್ಪಿಸಲು, ಆಯಾ ಗ್ರಂಥಪಾಲಕರನ್ನು ಪತ್ರಮುಖೇನ ಸಂಪರ್ಕಿಸಿ, ನಮಗೆ ಬೇಕಾದ ಮಾಹಿತಿಗಳನ್ನು ನಕಲು ತೆಗೆಸಿ ತರಿಸಿಕೊಳ್ಳಬಹುದು. ಜೆರಾಕ್ಸ್ (Xerox) ಸಾಧನದಿಂದ ಈಗೀಗ ನಕಲು ತೆಗೆಸುವ ಕ್ರಿಯೆಯೂ ಸಂಶೋಧಕರಿಗೆ ಅತ್ಯಂತ ಸುಲಭವಾಗಿದೆ. ಸಮಯಾನುಕೂಲತೆ ಇದ್ದ ಪಕ್ಷದಲ್ಲಿ ಗ್ರಂಥಾಲಯಗಳನ್ನು ಒಮ್ಮೆ ಸುತ್ತಿ, ಅಲ್ಲಿರುವ ಗ್ರಂಥಗಳನ್ನು ಪರಿಶೀಲಿಸಿ ಬರುವುದು ಮತ್ತೂ ಒಳ್ಳೆಯದು.

ಗ್ರಂಥಗಳಿಂದ ನಮಗೆ ಬೇಕಾದ ವಿಷಯಗಳನ್ನು ಟಿಪ್ಪಣಿ ಮಾಡಿಕೊಳ್ಳುವಾಗ, ಆ ಪುಸ್ತಕದ ಹೆಸರು, ಪ್ರಕಾಶಕರು, ಪ್ರಕಟಣೆ, ಪುಟಸಂಖ್ಯೆ ಇವುಗಳನ್ನು ಮರೆಯದೆ ಗುರುತು ಮಾಡಿಕೊಳ್ಳಬೇಕು. ಹಾಗೆ ಮಾಡುವುದರಿಂದ ಪದೇ ಪದೇ ಪುಸ್ತಕಗಳನ್ನು ಹುಡುಕುವ ಕೆಲಸ ತಪ್ಪಿಸಬಹುದು. ನಿಯತಕಾಲಿಕಗಳಿಂದ, ದಿನ ಪತ್ರಿಕೆಗಳಿಂದ ವಿಷಯ ಆರಿಸಿಕೊಳ್ಳುವಾಗಲೂ ಇದೇ ಕ್ರಮವನ್ನು ಅನುಸರಿಸಿದರೆ ಒಳ್ಳೆಯದು. ಆ ಪುಸ್ತಕದ ಹೆಸರನ್ನು ಸಂಕ್ಷೇಪ ರೂಪದಿಂದ ಟಿಪ್ಪಣಿ ಮಾಡಿಕೊಳ್ಳುವ ಹಾಳೆಯ ಮೂಲೆಯಲ್ಲಿ ಬರೆದಿಟ್ಟುಕೊಳ್ಳಬೇಕು. ಗ್ರಂಥಾಲಯವನ್ನು ಹೊಕ್ಕ ಸಂಶೋಧಕನಲ್ಲಿ ಈ ಎಲ್ಲ ಅಂಶಗಳು ನೆನಪಿನಲ್ಲಿರಬೇಕು.

# 10. ನಿಬಂಧ ರಚನಾಕ್ರಮ

## 10.1 ಮುನ್ನುಡಿ :

ನಿಬಂಧ ರಚನೆಯು ಒಂದು ಕಲೆ-ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಸಂಶೋಧಕ ತನ್ನ ವಿಮರ್ಶಾ ದೃಷ್ಟಿಕೋನವನ್ನು ತೋರಿ ಹೊಸದಾಗಿ ಹೇಳಲು ಹೊರಡುವುದೇ ನಿಬಂಧದ ರಚನೆ. ನಿಬಂಧ ರಚನೆಯಲ್ಲಿ ಸಂಶೋಧಕ ಇದ್ದಷ್ಟು ಹೆಚ್ಚು ಜಾಗರೂಕನಾಗಿರಬೇಕು. ಸಂಶೋಧಕ ತನಗೆ ಲಭ್ಯವಿರುವ ಮಾಹಿತಿಗಳ ಆಧಾರದ ಮೇಲಷ್ಟೇ ತೀರ್ಮಾನಗಳನ್ನು ಹೇಳುತ್ತಾನಾದುದರಿಂದ ತನ್ನ ವ್ಯಾಪ್ತಿಯನ್ನು ಅರಿತುಕೊಳ್ಳಬೇಕು. ತಾನು ಹೇಳಬೇಕಾಗಿರುವ ವಿಷಯಗಳ ಬಗೆಗೆ ಸ್ಪಷ್ಟವಾದ ಅಭಿಪ್ರಾಯ ಹಾಗೂ ಅಧ್ಯಯನಗಳನ್ನು ಮಾಡಿಕೊಂಡಿರಬೇಕು. ನಿಬಂಧ ರಚನೆಯಲ್ಲಿ ಸಂಶೋಧಕನಿಗೆ ಯಾವುದೇ ರೀತಿಯ ದಾಕ್ಷಿಣ್ಯಗಳಿರಬಾರದು. ಈವರೆಗೆ ಬಂದಿರುವ ಅಭಿಪ್ರಾಯಗಳನ್ನೆಲ್ಲಾ ಸತ್ಯದ ಒರೆಗೆ ಹಚ್ಚಿ ನಿರ್ದಿಷ್ಟವಾಗಿ ಹೇಳುವ ಅಭ್ಯಾಸ ಮಾಡಿಕೊಳ್ಳಬೇಕು. ಸಂಗ್ರಹಿಸಿದ ಮಾಹಿತಿಗಳನ್ನು ಕ್ರಮಬದ್ಧವಾಗಿ ಜೋಡಿಸಿಕೊಂಡು, ಹಾಕಿಕೊಂಡ ಅಧ್ಯಯನ ಯೋಜನೆಗಳಿಗನುಗುಣವಾಗಿ ಕ್ರಮಬದ್ಧವಾಗಿರಿಸಿಕೊಂಡು ನಿಬಂಧ ರಚನೆಗೆ ಆರಂಭಿಸಬೇಕು.

## 10.2 ನಿಬಂಧದ ಅಂಗಗಳು :

ಸಂಶೋಧಕ ಪರಿಪೂರ್ಣವಾದ ಅಧ್ಯಯನ ಹಾಗೂ ಮಾಹಿತಿ ಸಂಗ್ರಹಣೆಗಳನ್ನು ನಡೆಸಿದ ಅನಂತರ ತಾನು ಸಂಗ್ರಹಿಸಿದ ವಿಷಯಗಳನ್ನು ಕ್ರಮಬದ್ಧವಾಗಿ ಜೋಡಿಸಬೇಕು. ನಿಬಂಧ ರಚನೆಯ ಬಗೆಗೆ ನಿರ್ದಿಷ್ಟವಾದ ವಿಭಾಗಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಪ್ರಸ್ತುತಪಡಿಸುವ ವಿಚಾರಗಳಿಗನುಗುಣವಾಗಿ ನಿಬಂಧದ ಅಧ್ಯಾಯಗಳನ್ನು ಹೆಸರಿಸಿದ ಅನಂತರ ಸಂಗ್ರಹಿಸಿದ ಮಾಹಿತಿಗಳನ್ನು ಅದಕ್ಕನುಗುಣವಾಗಿ ಪ್ರತ್ಯೇಕವಾಗಿ ತೆಗೆದಿರಿಸಬೇಕು. ಒಂದೊಂದೂ ಅಧ್ಯಾಯಗಳಿಗೆ ಸಂಬಂಧಪಟ್ಟ ಮಾಹಿತಿಗಳನ್ನು ಮತ್ತೆ ಅಧ್ಯಯನ ನಡೆಸುವಂತೆ ಯಾವ ಯಾವ ವಿಚಾರ ಎಲ್ಲೆಲ್ಲಿ ಬರಬೇಕು ಎಂಬುದರ ಬಗೆಗೆ ಆಲೋಚಿಸಬೇಕು. ಅಡಿಟಿಪ್ಪಣಿಯಾಗಿ, ಉದ್ಧರಣಗಳನ್ನಾಗಿಯೂ ಇರುವಂಥವನ್ನು ಪ್ರತ್ಯೇಕವಾಗಿರಿಸಬೇಕು.

## 10.3 ಭಾಷೆ :

ನಿಬಂಧ ರಚನೆಯ ಭಾಷೆಯು ಸರಳವಾಗಿರಬೇಕು. ಸಂಶೋಧಕ ಮಂಡಿಸುವ ವಿಚಾರಗಳು ನೇರವಾಗಿರಬೇಕು, ಸ್ಪಷ್ಟವೂ ಆಗಿರಬೇಕು. ಯಾವುದೇ ರೀತಿಯ

ಸಂದಿಗ್ಧತೆಗೆ ಇಲ್ಲಿ ಅವಕಾಶವಿಲ್ಲ. ಸಂಶೋಧನಾ ನಿಬಂಧವು ಸರಳವಾಗಿ ಓದಿಸಿಕೊಂಡು ನೇರವಾದ ಅಭಿಪ್ರಾಯಗಳನ್ನು ಮೂಡಿಸಿದಂತೆ ಬಂದಿರಬೇಕು. ಓದುಗನನ್ನು ಗೊಂದಲಕ್ಕೀಡುಮಾಡುವಂತಿರಬಾರದು. ಪದಪ್ರೌಢಿಮೆಗೆ ನಿಬಂಧದಲ್ಲಿ ಅವಕಾಶ ಕೊಡಬಾರದು. ಅಪಾರ್ಥ ಕೊಡುವಂತೆ ಇಲ್ಲವೇ ಅರ್ಥವಾಗದಿರುವ ರೀತಿಯಲ್ಲಿರಬಾರದು. ಹೇಳಬೇಕಾದ ವಿಷಯಗಳನ್ನು ಸುತ್ತುಬಳಸಿಲ್ಲದೆ, ಅರ್ಥಸಂದಿಗ್ಧತೆಗಳಿಲ್ಲದಂತೆ ನೇರವಾಗಿ ಹೇಳಿರಬೇಕು. ನಿಬಂಧದಲ್ಲಿ ವಸ್ತುವಿನಷ್ಟೇ, ಭಾಷೆಯೂ ಮುಖ್ಯವಾದುದು. ಒಂದೊಂದು ವಿಷಯಗಳನ್ನೂ ಪಳಿಪಳಿಯಾಗಿ ಬಿಡಿಸುತ್ತಾ ಹೋದಂತೆ ನಿಬಂಧ ರಚನೆಯು ಸುಲಭವಾಗುತ್ತಾ ಹೋಗುತ್ತದೆ. ಸಂಶಯ ಹಾಗೂ ಸಂದೇಹಗಳು ತಲೆದೋರಿದೆಡೆಯಲ್ಲಿ ಮಾರ್ಗದರ್ಶಕರ ಸಹಾಯವನ್ನು ಪಡೆಯಬೇಕು.

## 10.4 ನಿಬಂಧದ ಶರೀರ : (ಪೀಠಿಕೆ–ಅಧ್ಯಾಯಗಳು-ಉಪಸಂಹಾರ)

**ಪೀಠಿಕೆ :** ಸಂಶೋಧಕನು ನಿಬಂಧ ರಚನೆಯನ್ನು ಮೊದಲಿಗೆ ನೇರವಾಗಿ ಅಧ್ಯಾಯಗಳಿಂದಲೇ ಆರಂಭಿಸಿದರೆ ಕೆಲವೊಂದು ವಿಷಯಗಳಿಗೆ ಹೆಚ್ಚಿನ ಪ್ರಯೋಜನವಿದೆ. ಅಧ್ಯಾಯಗಳನ್ನೆಲ್ಲಾ ಬರೆದು ಮುಗಿಸಿದಂತೆ, ತಾನು ಮಾಡಿದ ಕೆಲಸದ ಸ್ಪಷ್ಟವಾದ ಚಿತ್ರ ತನಗೆ ಸಿಗುತ್ತದೆ. ಇದರಿಂದ ಪೀಠಿಕಾ ವಿಭಾಗದಲ್ಲಿ, ಈ ವಿಷಯದ ವ್ಯಾಪ್ತಿಯ ಬಗೆಗೆ ಹೇಳಿಕೊಳ್ಳಲು ಸಹಾಯಕವಾಗುತ್ತದೆ. ಪೀಠಿಕೆಯನ್ನು ಮೊದಲೇ ಬರೆಯುವುದು ಸಾಧ್ಯವೆಂದಾದಲ್ಲಿ ಹಾಗೆಯೇ ಮಾಡಬಹುದು. ಪೀಠಿಕೆಯಲ್ಲಿ ಪ್ರಸ್ತುತ ನಿಬಂಧದ ವಿಷಯ, ಈ ವಿಷಯವನ್ನು ಆಯ್ದುಕೊಳ್ಳುವುದಕ್ಕಿರುವ ಕಾರಣ, ಈ ಕ್ಷೇತ್ರದಲ್ಲಿ ಇದುವರೆವಿಗೆ ನಡೆದಿರುವ ಕೆಲಸ, ಯಾರುಯಾರು, ಎಷ್ಟೆಷ್ಟು ಕೆಲಸ ನಡೆಸಿದ್ದಾರೆನ್ನುವ ಸ್ಥೂಲವಾದ ಸಮೀಕ್ಷೆ, ತಾನು ಇದರಲ್ಲಿ ಪ್ರಕೃತ ನಡೆಸಲು ಉದ್ದೇಶಿಸಿರುವುದರ ವ್ಯಾಪ್ತಿ ಇತ್ಯಾದಿಗಳನ್ನು ಹೇಳಬೇಕಾಗುತ್ತದೆ. ಮುಂದಿನ ಅಧ್ಯಾಯಗಳಿಗೆಲ್ಲ ಇದು ಪೀಠಿಕೆಯಾಗುತ್ತದೆ. ಸಂಶೋಧಕನ ಉದ್ದೇಶ ಹಾಗೂ ಆತನ ಸಂಶೋಧನೆಯ ಪರಿಮಿತಿಯನ್ನು ಸೂಚಿಸುವುದಕ್ಕೆ ಇದು ಜಾಗವಾಗುತ್ತದೆ.

**ಅಧ್ಯಾಯಗಳು :** ಅಧ್ಯಾಯಗಳು ಬೇರೆಬೇರೆ ವಿಭಾಗಗಳಾಗಿ ವಿಂಗಡಿಸಲಾದ ನಿಬಂಧದ ಭಾಗಗಳು. ಆಯಾ ವಿಷಯಕ್ಕೆ ತಕ್ಕಂತೆ ವಿಭಜಿಸಿಕೊಂಡು ಅಧ್ಯಾಯಗಳನ್ನು ಮಾಡಿಕೊಳ್ಳಬಹುದು. ಅಧ್ಯಾಯಗಳು ಪೀಠಿಕೆಯ ಅನಂತರ ಬರಬೇಕು. ಪೀಠಿಕೆಗೆ ಸಾಮಾನ್ಯವಾಗಿ ಅಧ್ಯಾಯವೆಂದು ಹೆಸರು ಹಾಕುವ ಪದ್ಧತಿಯಿಲ್ಲ. ನಿಬಂಧದ ಶರೀರವು ಪೀಠಿಕೆಯಿಂದಾರಂಭಿಸಿ, ಉಪಸಂಹಾರದವರೆಗೆ ಮುಖ್ಯವಾಗಿರುವುದಾದರೂ ಸಂಶೋಧಕನ ಶ್ರಮವು ಪ್ರತಿಯೊಂದು ಕಡೆಯೂ ಎದ್ದುಕಾಣುವಂತಿರಬೇಕು.

**ಉಪಸಂಹಾರ :** ಇಲ್ಲಿ ಸಂಶೋಧಕ ತಾನು ಕಂಡುಕೊಂಡ ಹೊಸ ವಿಚಾರಗಳನ್ನು ಕೊಡಬೇಕು. ಸಂಶೋಧನೆ ನಡೆಸಿದ ಕ್ಷೇತ್ರದಲ್ಲಿ ಸಂಶೋಧಕನು ತನ್ನ ಕೊಡುಗೆಯೇನೆಂಬುದನ್ನು ಕ್ರಮವಾಗಿ ತಿಳಿಸಬೇಕು. ಇದರಿಂದ ನಿಬಂಧದಲ್ಲಿ ಮೂಡಿ ಬಂದಿರುವ, ಚರ್ಚಿಸಲ್ಪಟ್ಟಿರುವ ಸಂಗತಿಗಳೇನು ? ಇತ್ಯರ್ಥಗೊಂಡ ವಿಚಾರಗಳಾವುವು ಎಂಬುದರ ಒಟ್ಟು ಪರಿಚಯ ಗೊತ್ತಾಗುವಂತಿರಬೇಕು. ಇದರಿಂದ ಸಂಶೋಧಕನ ಸಂಶೋಧನಾ ಮೌಲ್ಯವು ಓದುಗರಿಗೆ ಇಲ್ಲೇ ಲಭಿಸುವಂತಿರಬೇಕು. ಪೀಠಿಕೆಯಲ್ಲಿ ಸಂಶೋಧಕನು ಹೇಳಿಕೊಂಡ ಸಂಶೋಧನೆಯ ವ್ಯಾಪ್ತಿಯನ್ನು ಉಪಸಂಹಾರದಲ್ಲಿನ ಸಂಶೋಧನೆಯ ಕೊಡುಗೆಗಳು ಪ್ರತಿಬಿಂಬಿಸುವಂತಿರಬೇಕು.

ಪ್ರತಿ ಅಧ್ಯಾಯದಲ್ಲಿ ಕಂಡುಕೊಂಡ ಹೊಸ ವಿಚಾರಗಳನ್ನು ಅಧ್ಯಾಯ ಕ್ರಮದಲ್ಲೇ ಉಪಸಂಹಾರದಲ್ಲಿ ಕೊಡಬಹುದು. ಅಥವಾ ಅಧ್ಯಾಯದ ಸಂಖ್ಯೆಯನ್ನು ಅಲ್ಲೇ ಆವರಣದಲ್ಲಿ ಸೂಚಿಸಬಹುದು. ಉಪಸಂಹಾರವೂ ಅಷ್ಟೆ. ಸರಳವಾಗಿ, ಚುಟುಕಾಗಿದ್ದು ಸೂಕ್ಷ್ಮವಾಗಿರಬೇಕು. ಅಲ್ಲಿ ಸೂಚಿಸಲಾದ ಹೆಚ್ಚಿನ ವಿವರಗಳಿಗೆ ಅಧ್ಯಾಯಗಳನ್ನು ಸೂಚಿಸುವಂತಿರಬೇಕು. ಉಪಸಂಹಾರವು ಸಂಶೋಧಕ ಕಂಡು ಹಿಡಿಯುವಿಕೆಗಳ ಅಥವಾ ಸಂಶೋಧನಗಳಿಗೆ ಕೈಗನ್ನಡಿಯಾಗಿರಬೇಕು.

## 10.5 ಉದ್ಧರಣಗಳು (Quotations)

ನಿಬಂಧ ರಚನೆಯಲ್ಲಿ ಯಾವುದೇ ಜಾಗದಲ್ಲಿ ಸಂಶೋಧಕನು ಉದ್ಧರಿಸುವ ವಿಷಯಕ್ಕೆ ಸಂಬಂಧಿಸಿದಂತೆ ಇತರ ವಿದ್ವಾಂಸರ ಹೇಳಿಕೆಗಳನ್ನು ಬಳಸಿದರೆ ಅದು ಉದ್ಧರಣೆಯಾಗುತ್ತದೆ. ಉದ್ಧರಣೆ (Quotation) ಗಳು ಕೇವಲ ಭೂಷಣಕ್ಕೆಂದು ಬರಬಾರದು. ಸಂಶೋಧಕನು ಉದ್ಧರಣೆಗಳನ್ನು ಕೊಡುವಾಗ ಜಾಗರೂಕನಾಗಿರಬೇಕು. ದೊಡ್ಡ ವಿದ್ವಾಂಸರೆಂದು ಹೆಸರು ಹೊಂದಿರುವಂಥವರ ಹೇಳಿಕೆಗಳನ್ನು ಒಪ್ಪಿಕೊಳ್ಳುವಾಗಲಾಗಲೀ, ಒಪ್ಪದೆ ಇರುವಾಗಲಾಗಲೀ ಉದ್ಧರಣೆಗಳನ್ನು ಕೊಡಬೇಕು. ಹಲವು ಸಲ ನಮ್ಮ ಅನಿಸಿಕೆಗಳಿಗೆ, ಅಭಿಪ್ರಾಯಗಳಿಗೆ ಪೋಷಕವಾಗಿಯೂ ಬಳಸಿಕೊಳ್ಳಬಹುದು. ಉದ್ಧರಣೆಗಳು ಸುದೀರ್ಘವಾಗಿದ್ದಲ್ಲಿ ಅದರ ತಿರುಳನ್ನು ಮಾತ್ರವೇ ಕೊಟ್ಟು, ಉಳಿದುದನ್ನು ಅಡಿಟಿಪ್ಪಣಿಯನ್ನಾಗಿಯೂ ಕೊಡಬಹುದು. ನಿಬಂಧದ ತುಂಬಾ ಉದ್ಧರಣೆಗಳನ್ನು ತುರುಕಬಾರದು ಕೇವಲ ಉದ್ಧರಣೆಗಳನ್ನು ಕೊಡುವುದರಿಂದಷ್ಟೇ ನಿಬಂಧಕ್ಕೆ ಕಳೆಯೇನೂ ಬಾರದು. ಅಗತ್ಯವಿದ್ದಲ್ಲಿ ಮಾತ್ರವೇ ಕೊಡಬೇಕು ಎಂದು ಸಂಶೋಧಕ ತಿಳಿದಿರಬೇಕು.

ಇತರರ ಹೇಳಿಕೆಗಳನ್ನು ಸಂಶೋಧಕನು ಅಲ್ಲಗಳೆಯುತ್ತಾನೆಂದಾದರೆ ಅಂಥಾ ಕಡೆಗಳಲ್ಲಿ ಸಕಾರಣವಾಗಿಯೇ ತಿಳಿಸಬೇಕಾಗುತ್ತದೆ. ವಿದ್ವಾಂಸರೆಂಬ ಹೆಸರಿಗಾಗಿ

ಅವರ ಹೇಳಿಕೆಗಳನ್ನು ಹಾಗೆಯೇ ಸ್ವೀಕರಿಸುವುದಾಗಲೀ, ಸಾಮಾನ್ಯರೆಂಬ ನೆಲೆಯಿಂದ ಇತರರ ಹೇಳಿಕೆಗಳನ್ನು ಗಮನಿಸದೇ ಹೋಗುವುದಾಗಲೀ ಮಾಡಬಾರದು. ಸಂಶೋಧನೆಯ ದೃಷ್ಟಿಯಲ್ಲಿ ಈ ಎಲ್ಲರಿಗೂ ಒಂದೇ ಸ್ಥಾನವೆಂಬುದು ಸದಾ ನೆನಪಿನಲ್ಲಿರಬೇಕು.

## 10.6 ಅಡಿ ಟಿಪ್ಪಣಿ : (Foot notes)

ಅಡಿಟಿಪ್ಪಣಿಗಳೆಂದರೆ ಪೂರಕವಾದ ವಿಚಾರಗಳನ್ನು ಕೊಡುವುದು. ಒಂದು ವಿಚಾರವನ್ನು ಪ್ರಸ್ತುತಪಡಿಸುವಾಗ ಅದಕ್ಕೆ ಸಂಬಂಧಿಸಿದ ಹೆಚ್ಚಿನ ವಿಚಾರಗಳನ್ನು ಕೊಡಬೇಕಾಗಿ ಬಂದಾಗ ಅಂಥಾ ಕಡೆಗಳಲ್ಲಿ ಒಂದು ಸಂಖ್ಯೆಯನ್ನು ಕೊಟ್ಟು ಅದನ್ನು ಆಯಾ ಪುಟದ ಕೆಳಗಡೆಗೆ ಅಥವಾ ಅಧ್ಯಾಯದ ಕೊನೆಯಲ್ಲಿ ವಿಷಯವನ್ನು ಕೊಡಬೇಕು. ಅಡಿಟಿಪ್ಪಣಿಗಳನ್ನು ಆಯಾ ಪುಟಗಳಲ್ಲೇ ಕೊಡುವುದರಿಂದ ನಿಬಂಧವನ್ನು ಓದುವವರಿಗೆ ಹೆಚ್ಚು ಅನುಕೂಲತೆಯಿರುತ್ತದೆ. ಅಧ್ಯಾಯದ ಕೊನೆಗೆ ಕೊಡುವುದರಿಂದ ನಿಬಂಧದ ಬೆರಳಚ್ಚು ಮಾಡುವುದಕ್ಕೆ ಹೆಚ್ಚು ಅನುಕೂಲವಿರುತ್ತಾದಾದರೂ ಓದುಗರಿಗೆ ಶ್ರಮ ಹೆಚ್ಚು. ಆಧುನಿಕ ನಿಬಂಧಗಳಲ್ಲಿ ಎರಡೂ ವಿಧಾನಗಳು ಬಳಕೆಯಲ್ಲಿವೆ.

ಅಡಿಟಿಪ್ಪಣಿಯು ಒಂದೇ ವಿಚಾರವನ್ನು ಕುರಿತು ಮುಂದೆಲ್ಲಾ ಬರುತ್ತಿರುವಾಗ ಅದೇ ಪುಟ ಇತ್ಯಾದಿಯಾಗಿ ಬರುವಂಥಾದ್ದನ್ನು, ಆಯಾ ವಾಕ್ಯಗಳಲ್ಲೇ ಆವರಣದೊಳಗೂ ಕೊಡಬಹುದಾಗಿದೆ. ಆದುದರಿಂದ ಪೂರಕವಾದ ವಿಚಾರಗಳನ್ನು ಮಾತ್ರವೇ ಅಡಿಟಿಪ್ಪಣಿಯಾಗಿ ಕೊಡುವುದು ಹೆಚ್ಚು ಸೂಕ್ತ, ಅಡಿಟಿಪ್ಪಣಿಗಳು ನೇರವಾಗಿ ನಿಬಂಧದ ವಿಷಯಕ್ಕೆ ಸಂಬಂಧಿಸಿದ ಪೂರಕ ವಿಚಾರಗಳೇ ಆಗುವುದರಿಂದ ಅವುಗಳಿಗೂ ವಿಶೇಷವಾದ ಸ್ಥಾನವಿದೆ. ಅವುಗಳನ್ನು ಕೊಡುವಾಗ ಎಚ್ಚರಿಕೆ ಅಗತ್ಯ.

## 10.7 ಸಂಕ್ಷೇಪ ಚಿಹ್ನೆಗಳು : (Abbreviations)

ಸಂಶೋಧಕನು ಮಾಹಿತಿ ಸಂಗ್ರಹಿಸುವುದಕ್ಕಾಗಲೀ ನಿಬಂಧ ರಚನೆಯಲ್ಲಾಗಲೀ ಸಂಕ್ಷೇಪ ಚಿಹ್ನೆಗಳನ್ನು ಬಳಸಿಕೊಳ್ಳುವುದರಿಂದ ಸಮಯವನ್ನೂ, ಜಾಗವನ್ನೂ ಉಳಿತಾಯ ಮಾಡಿಕೊಳ್ಳಬಹುದು. ಪುಸ್ತಕಗಳ ಹೆಸರನ್ನು ಒಂದೆರಡು ಅಕ್ಷರ ಬಳಸಿ ಹೇಳಬಹುದು. ಉದಾಹರಣೆಗೆ ಕನ್ನಡ ಸಾಹಿತ್ಯ ಚರಿತ್ರೆ (ಕ. ಸಾ. ಚ) ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ (ಹೊ. ಕ. ಇಂ. ಪ್ರ) ಇತ್ಯಾದಿ ಹೆಚ್ಚು ಪದಗಳುಳ್ಳ ತಾಂತ್ರಿಕ ವಿಚಾರಗಳಿಗೆ ಸಂಬಂಧಿಸಿದ ಪದಗಳಿಗೆಲ್ಲಾ ಈ ರೀತಿ ಸಂಕ್ಷೇಪ ರೂಪಗಳನ್ನು ಬಳಸಿಕೊಳ್ಳುವಾಗ ಒಂದಕ್ಕೊಂದು ಅದಲು ಬದಲಾಗದಂತೆ

ಎಚ್ಚರಿಕೆ ವಹಿಸಬೇಕು. ನಿಬಂಧದಲ್ಲಿ ಬಳಸಲಾಗುವ ಸಂಕ್ಷೇಪ ರೂಪಗಳ ಪಟ್ಟಿಯನ್ನು ನಿಬಂಧದ ಮೊದಲಲ್ಲೇ ಕೊಡಬೇಕು.

## 10.8 ಗ್ರಂಥ ಸೂಚಿ : (Bibliography)

ನಿಬಂಧ ರಚನೆಗೆ ಸಹಾಯಕವಾಗಿ ಅಧ್ಯಯನ ನಡೆಸಿ ಪೂರಕ ವಿಚಾರಗಳನ್ನು ಆಯ್ದುಕೊಳ್ಳುತ್ತಿರುವಾಗಲೇ, ಆ ಗ್ರಂಥಗಳ ಪೂರ್ತಿ ಮಾಹಿತಿಗಳನ್ನು ಪ್ರತ್ಯೇಕವಾಗಿ ಬರೆದಿಟ್ಟುಕೊಳ್ಳಬೇಕು. ಗ್ರಂಥದ ಹೆಸರು ಲೇಖಕ, ಪ್ರಕಾಶಕರು, ಪ್ರಕಟಣೆಯ ವರ್ಷ, ಮುದ್ರಣ ಇತ್ಯಾದಿ, ನಿಬಂಧದ ಕೊನೆಯಲ್ಲಿ ಇವುಗಳನ್ನು ಅಕಾರಾದಿಯಾಗಿ ಆಯಾ ಭಾಷೆಗಳ ಪುಸ್ತಕವಾರು ಕ್ರಮವನನುಸರಿಸಿ ಪ್ರತ್ಯೇಕವಾಗಿ ಕೊಡಬೇಕು.

## 10.9 ಅನುಬಂಧ : (Appendix)

ಅನುಬಂಧದಲ್ಲಿ ಹೆಚ್ಚಿನ ವಿಷಯಗಳನ್ನು ಕೊಡುವ ಪದ್ಧತಿ. ನಿಬಂಧದ ಮುಖ್ಯ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಅನುಬಂಧದಲ್ಲಿ ಕೊಡಬಹುದು. ಒಂದು ಸಾಹಿತ್ಯ ಪ್ರಕಾರದ ಸಮೀಕ್ಷೆ ನಡೆಸುವಾಗ ಆ ಸಾಹಿತ್ಯ ಪ್ರಕಾರದ ಕೃತಿಗಳ ಮಾಹಿತಿಗಳನ್ನು ಕೊಡಬಹುದು. ಉದಾಹರಣೆಗೆ ಹೊಸಗನ್ನಡದ ಸಾಹಿತ್ಯದ ಉಗಮ ಮತ್ತು ವಿಕಾಸ.1860–1920 ಎಂಬ ನಿಬಂಧದಲ್ಲಿ 1860ನೇ ವರ್ಷದಿಂದ 1920ನೇ ವರ್ಷದ ಒಳಗೆ ಪ್ರಕಟವಾದ ಕೃತಿಗಳನ್ನು ಅಕಾರಾದಿ ವರ್ಷಾನುಕ್ರಮದಲ್ಲಿ ಕೊಡಬಹುದು.

## 10.10 ಬೆರಳಚ್ಚು ಇತ್ಯಾದಿ :

ಈಚಿನ ದಿನಗಳಲ್ಲಿ ಕನ್ನಡ ಸಾಹಿತ್ಯ, ಭಾಷೆಗಳಿಗೆ ಸಂಬಂಧಿಸಿದ ಸಂಶೋಧನಾ ನಿಬಂಧಗಳು ಸಾಮಾನ್ಯವಾಗಿ ಕನ್ನಡ ಬೆರಳಚ್ಚಿನಿಂದಲೇ ನಡೆಯುತ್ತದೆ. ಕೆಲವೆಡೆ ಅಪರೂಪಕ್ಕೆ ಕೈ ಬರಹದಲ್ಲಿ ಕೊಡುವುದೂ ಇದೆ. ವಿಶ್ವವಿದ್ಯಾಲಯಗಳಲ್ಲಿ ಪಿ.ಹೆಚ್‌ಡಿ. ಪದವಿಗಾಗಿ ನಾಲ್ಕೈದು ಪ್ರತಿಗಳನ್ನು ಸಾದರಪಡಿಸಬೇಕಾಗಿರುವುದರಿಂದ ಬೆರಳಚ್ಚಿನ ಪ್ರತಿ ಮಾಡಿಸುವುದು ಸುಲಭವಾಗುತ್ತದೆ, ಕನ್ನಡದ ಬೆರಳಚ್ಚು ಅಷ್ಟಾಗಿ ಪರಿಷ್ಕೃತವಾದುದಲ್ಲವಾದರೂ ತಕ್ಕ ಮಟ್ಟಿಗೆ ಅಡ್ಡಿಯಿಲ್ಲ ಎಂದೇ ಹೇಳಬಹುದು. ಕೆಲವೊಂದು ಲಿಪಿಗಳನ್ನು ಸರಿಯಾಗಿ ಓದಲೇ ಬರುವುದಿಲ್ಲ. (ಉದಾಹರಣೆಗೆ : ಜ,ಟಿ, ಲ/ಲ ಇತ್ಯಾದಿ) ತಾಂತ್ರಿಕವಾಗಿ ಕನ್ನಡ ಬೆರಳಚ್ಚು ಇನ್ನೂ ಸುಧಾರಿಸಬೇಕಾಗಿದೆ. ಏನಿದ್ದರೂ ನಿಬಂಧವನ್ನು ಬೆರಳಚ್ಚಿಸಲ್ಲಾಗಲೀ, ಕೈ ಬರಹವಲ್ಲಾಗಲೀ ಸಿದ್ಧಪಡಿಸುವಾಗ ಇನ್ನೂ ಹೆಚ್ಚಿನ ಜಾಗರೂಕತೆ ಅಗತ್ಯ. ಅಕ್ಷರ ಸ್ಖಾಲಿತ್ಯದಿಂದ ಉದ್ದೇಶಿತ ಪರಿಣಾಮವಾಗದೆ ಅಪಾರ್ಥಗಳೋ ಅನರ್ಥಗಳೋ ಸಂಭವಿಸಬಹುದಾದ ಅಪಾಯವಿದೆ. ಈ ದೃಷ್ಟಿಯಿಂದಲೂ ಸಂಶೋಧಕ ಅತಿ ಹೆಚ್ಚಿನ ಎಚ್ಚರಿಕೆಯನ್ನು ವಹಿಸಬೇಕು.

ಹೀಗೆ ಸಿದ್ಧಪಡಿಸಿದ ನಿಬಂಧದ ಹಾಳೆಗಳನ್ನು ಈ ರೀತಿ ಜೋಡಿಸಿಟ್ಟುಕೊಂಡರೆ ಒಳ್ಳೆಯದು.

ರಕ್ಷಾಪುಟ (Cover Page)
ಒಳ ರಕ್ಷಾಪುಟ (ಇದು ಹೊರ ರಕ್ಷಾಪುಟದ ಪ್ರತಿಯೇ ಆಗಿರುತ್ತದೆ - Inner Page)
ಅರ್ಹತಾ ಪತ್ರ (Certificate)
ಕೃತಜ್ಞತಾ ಪತ್ರ ಅಥವಾ ಸಂಶೋಧಕನ ಸರ್ಟಿಫಿಕೇಟು (Acknowledgement)
ಅನುಕ್ರಮಣಿಕೆ ಪುಟ (Content Page)
ಸಂಕ್ಷೇಪ ಚಿಹ್ನೆ (Abbreviation)
ಪೀಠಿಕೆ (Introduction)
ಅಧ್ಯಾಯಗಳು (Chapters)
ಉಪಸಂಹಾರ (Conclussion)
ಗ್ರಂಥಸೂಚಿ (Bibliography)
ಅನುಬಂಧ (Appendix)

ಸಾಮಾನ್ಯವಾಗಿ ನಿಬಂಧನೆಯ ಜೋಡಣೆ ಕ್ರಮ ಇದು. ಈ ಕ್ರಮ ಏರು-ಪೇರಾಗದಂತೆ, ಪುಟಗಳ ಸಂಖ್ಯೆ ನಮೂದಿಸುವಾಗ ತಪ್ಪಾಗದಂತೆ, ಇಲ್ಲವೇ ಬಿಟ್ಟು ಹೋಗದಂತೆ ಎಚ್ಚರವಹಿಸಬೇಕು. ರಟ್ಟು ಹಾಕಿಸಿದ ನಂತರ ಅಂದವಾದ ಮುಖ ಪುಟವನ್ನು ತಯಾರಿಸಿ ಹೊದಿಸಿದರೆ ಆಯಿತು. ಹೀಗೆ ನಿಬಂಧವನ್ನು ಪುಸ್ತಕ ರೂಪದಲ್ಲಿ ತರುವಾಗ ಜಾಗರೂಕತೆಯಿಂದಿರಬೇಕು.

# 11. ಸಂಕ್ಷೇಪ ಚಿಹ್ನೆಗಳು (ಮಾದರಿ)

11.1

ಅ.ಕಾ.ಬ — ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿ
ಅ.ಸ.ರ — ಅಬಲಾ ಸಚ್ಚರಿತ್ರ ರತ್ನಮಾಲೆ
ಇಂ.ಗೀ — ಇಂಗ್ಲೀಷ್ ಗೀತೆಗಳು
ಕ.ಕ.ಚ — ಕರ್ನಾಟಕ ಕವಿಚರಿತೆ
ಕ.ನಾ — ಕನ್ನಡ ನಾಟಕ
ಕ.ನು — ಕನ್ನಡ ನುಡಿ
ಕ.ಭಾ — ಕರ್ನಾಟಕ ಭಾರತಿ
ಕ.ರ.ನಾ — ಕರ್ನಾಟಕ ರತ್ನಾವಳಿ ನಾಟಕ
ಕ.ರ.ಮಾ — ಕವಿರಾಜ ಮಾರ್ಗ
ಕ.ವಿ — ಕನ್ನಡ ವಿಶ್ವಕೋಶ
ಕ.ಸಾ.ಇ — ಕನ್ನಡ ಸಾಹಿತ್ಯದ ಇತಿಹಾಸ
ಕ.ಸಾ.ಚ — ಕನ್ನಡ ಸಾಹಿತ್ಯ ಚರಿತ್ರೆ
ಕ.ಸಾ.ಪ.ಪ — ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ
ಪ್ರ.ಕ — ಪ್ರಬುದ್ಧ ಕರ್ನಾಟಕ
ಸಾ.ಪ್ರ — ಸಾಹಿತ್ಯದ ಪ್ರಕಾರಗಳು
ಸಾ.ಸ — ಸಾಹಿತ್ಯ ಸಂಗಮ
ಹೊ. ಅ — ಹೊಸಗನ್ನಡ ಅರುಣೋದಯ
ಹೊ.ಕ.ಇಂ.ಪ್ರ — ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ
ಹೊ.ಗ.ಉ — ಹೊಸಗನ್ನಡ ಉದಯಕಾಲ
C.W.S — Complete works of Shakespeare
E.B — Encyclopaedia Britanica
H.B.L — History of Bengali Literature
H.K.L — History of Kannada Literature

[ಆಕರ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ 1860-1920, ಕನ್ನಡ ವಿಭಾಗ, ಮದರಾಸು ವಿ.ವಿ. 1983, ಸಂಶೋಧಕ : ಹರಿಕೃಷ್ಣ ಭಟ್ ಭರಣ್ಯ.]

## 11.2 ಟಿಪ್ಪಣಿ – ಅಂಚೆ ಕಾರ್ಡ್ ಮಾದರಿ :

ಟಿಪ್ಪಣಿ ಮಾಡಿಟ್ಟುಕೊಳ್ಳುವಾಗ ವಿಷಯ ವೈವಿಧ್ಯಕ್ಕೆ ತಕ್ಕಂತೆ ಬಣ್ಣ ಬಣ್ಣದ ಕಾರ್ಡು ಉಪಯೋಗಿಸಬಹುದು. ಕಾರ್ಡಿನಲ್ಲಿ ಟಿಪ್ಪಣಿ ಮಾಡುವ ಕ್ರಮವನ್ನು ಇಲ್ಲಿ ತೋರಿಸಲಾಗಿದೆ.

**ಸಂಶೋಧನ ನಿಬಂಧ** : ತಮಿಳಿನಲ್ಲಿ ಕನ್ನಡದ ವೀರಶೈವ ಕೃತಿಗಳು.

**ಅಪ್ರಕಟಿತ** : ಸಂಶೋಧಕ : ಡಾ|| ಪ್ರ. ಪಿ. ಕುಲಕರ್ಣಿ
ಮದುರೈ ಕಾಮರಾಜ ವಿಶ್ವವಿದ್ಯಾಲಯ, 1982

---

**ವೀರಶೈವ ಧರ್ಮ**

ಪು. 15 ತಮಿಳು ಶೈವ ಕೃತಿಗಳಲ್ಲಿ ವೀರಶೈವ ಧರ್ಮದ ಪ್ರಭಾವ

i) ವಿಕ್ರಮ ಚೋಳನ ಕಾಲ (ಸು. ಕ್ರಿ.ಶ. 1120 ರಿಂದ 1136) ಒಟ್ಟಕೂತ್ತರ್ ಕೃತಿ 'ತಕ್ಕಯಾಗಪ್ಪರಣಿ' ಇದರಲ್ಲಿ ಶಿವನ ಅನಂತ ಲೀಲೆಯ ವರ್ಣನೆ–ವೀರಭದ್ರ-ದಕ್ಷನ ವಧೆ ಘಟನೆ.

ii) ಭಕ್ತಮೈಕಂಡದೇವ (ಸು. ಕ್ರಿ.ಶ. 1215) – ಶಿವಜ್ಞಾನಬೋಧಂ ಶೈವಸಿದ್ಧಾಂತದ ಆಧಾರ ಗ್ರಂಥ.

* ಇದರಿಂದ 14 ನೆಯ ಶತಮಾನದಲ್ಲಿ ವೀರಶೈವ ಧರ್ಮ ತಮಿಳುನಾಡಿನಲ್ಲಿ ಪ್ರಚಾರದಲ್ಲಿದ್ದಿರಬಹುದು.

ಇದೇ ರೀತಿಯಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ಅವಲೋಕಿಸಿದ ಎಲ್ಲ ಕೃತಿಗಳಿಂದಲೂ ಉಪಯುಕ್ತವಾದ ಮಾಹಿತಿಗಳನ್ನು ಮೇಲಿನ ರೀತಿಯಲ್ಲಿ ಸಂಗ್ರಹ ಮಾಡಿಟ್ಟುಕೊಳ್ಳಬಹುದು.

## 11.3 ಕ್ಷೇತ್ರಕಾರ್ಯ ಸಂದರ್ಶನ – ಮಾದರಿ ಪ್ರಶ್ನಾವಳಿ

(ಕನ್ನಡದ ಐತಿಹಾಸಿಕ ಕಾದಂಬರಿಗಳು)

ಸಂದರ್ಶಕನ ಹೆಸರು :

ಮಾಹಿತಿದಾರನ ಹೆಸರು : ವಯಸ್ಸು :

ವಿಳಾಸ :

ವಿದ್ಯಾಭ್ಯಾಸ :

ಉದ್ಯೋಗ :

1. ಕನ್ನಡ ಸಾಹಿತ್ಯದ ಬಗ್ಗೆ ಅಭಿರುಚಿ ಇದೆಯೆ ? ಹೌದು/ಇಲ್ಲ
2. ಸಾಹಿತ್ಯದಲ್ಲಿ ಯಾವಯಾವ ಪ್ರಕಾರಗಳನ್ನು ಗಮನಿಸಿರುವಿರಿ.
3. ಕಾದಂಬರಿಯ ಅಧ್ಯಯನದಲ್ಲಿ ನಿಮ್ಮ ಅಭಿರುಚಿ ಯಾವ ಪ್ರಕಾರಕ್ಕೆ.
4. ಎಷ್ಟು ಐತಿಹಾಸಿಕ ಕಾದಂಬರಿಗಳನ್ನು ಓದಿರುವಿರಿ.
5. ನೀವು ಓದಿದ ಐತಿಹಾಸಿಕ ಕಾದಂಬರಿಗಳಲ್ಲಿ ಪ್ರಮುಖರಾದವರು ಯಾರು ಯಾರು ?
6. ನೀವು ಅಭ್ಯಾಸ ಕಾಲದಲ್ಲಿ ಮೆಚ್ಚಿಕೊಂಡ ಕೃತಿಕಾರ ಹಾಗೂ ಅವರ ಕೃತಿ ಯಾವುದು ?
7. ಐತಿಹಾಸಿಕ ಕಾದಂಬರಿಗೂ ಇತರ ಕಾದಂಬರಿಗೂ ಇರುವ ವ್ಯತ್ಯಾಸವೇನು ?
8. ಐತಿಹಾಸಿಕ ಕಾದಂಬರಿಗಳು ಇತಿಹಾಸ ನಿರೂಪಣೆಯಲ್ಲಿ ಸಮರ್ಥ ಪಾತ್ರ ವಹಿಸಿದೆಯೇ ? ಹೇಗೆ ?
9. ಅಂತಹ ಕಾದಂಬರಿ ಓದುವಾಗ ಚಾರಿತ್ರಿಕ ಘಟನೆಗಳು ಸತ್ಯವಾಗಿವೆ ಎನ್ನಿಸುವುದೆ ?
10. ನಿರೂಪಿತಗೊಂಡಿರುವ ಘಟನೆ, ಮಾಹಿತಿಗಳು ನಂಬಲರ್ಹವೇ ? ಏಕೆ ?
11. ಕಾದಂಬರಿಕಾರನಿಗೆ ಇಂತಹ ಕಾದಂಬರಿಗಳ ರಚನೆಯಲ್ಲಿರುವ ಅನುಕೂಲಗಳೇನು ?
12. ಚಾರಿತ್ರಿಕ ಕಾದಂಬರಿಗಳ ಹುಟ್ಟಿಗೆ ಕಾರಣವನ್ನು ಕೊಡಬಲ್ಲಿರಾ.
13. ಈ ರೀತಿಯ ಕಾದಂಬರಿಗಳ ಅಧ್ಯಯನದಿಂದ ಓದುಗನ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮವೇನು ?

14. ಈ ತೆರನ ಕಾದಂಬರಿಗಳ ನಿರೂಪಣೆಯಲ್ಲಿ ಲೇಖಕನ ಉದ್ದೇಶವೇನು ?
15. ಲೇಖಕನ ವೈಚಾರಿಕತೆಗೆ ಇಲ್ಲಿ ಸ್ಥಾನವಿದೆಯೇ ? ಹೇಗೆ ?
16. ಈ ವಿಧದ ಕೃತಿಗಳಲ್ಲಿ ಸಮಕಾಲೀನತೆಯ ಅಂಶಗಳನ್ನು ಗುರುತಿಸಬಹುದೇ ? ಇದ್ದರೆ ಅವು ಎಷ್ಟರಮಟ್ಟಿಗೆ ಪರಿಣಾಮಕಾರಿ.
17. ಇತಿಹಾಸದ ಅಂಶಗಳಲ್ಲಿ ಕಾದಂಬರಿಕಾರ ತನ್ನ ಸಮಕಾಲೀನ ವಿಚಾರಗಳನ್ನು ಸೇರಿಸುವ ಸಾಧ್ಯತೆಯಿದೆಯೇ ?
18. ಹಾಗೆ ಮಾಡಿದಾಗ ಕಾದಂಬರಿಯ ವಸ್ತುನಿಷ್ಠತೆಗೆ ಕೊರತೆಯುಂಟಾಗುವುದಿಲ್ಲವೆ ?
19. ಇಡೀ ದೇಶದ ಪರಂಪರೆ ಒಂದು ಪ್ರದೇಶದ ಲೇಖಕನ ಕಾದಂಬರಿಯಲ್ಲಿ ಮೂಡಿಬರುವ ಸಾಧ್ಯತೆಯಿದೆಯೇ ?
20. ಇಂತಹ ಕಾದಂಬರಿಗಳಲ್ಲಿನ ವಿವರಣೆ ಓದುಗನ ಮೇಲೆ ಉಂಟುಮಾಡುವ ಪರಿಣಾಮವೇನು ? ಅವನಿಗೆ ತನ್ನ ದೇಶದ ಮೇಲೆ ಅಭಿಮಾನವುಂಟಾಗಬಲ್ಲುದೆ.
21. ಈ ರೀತಿಯ ಕಾದಂಬರಿಗಳ ಭಾಷೆ–ತಂತ್ರದ ಬಗೆಗೆ ನಿಮ್ಮ ಅನಿಸಿಕೆಯೇನು ?
22. ಐತಿಹಾಸಿಕ ಕಾದಂಬರಿಕಾರ ಅನುಸರಿಸಬೇಕಾದ ಇತಿ–ಮಿತಿಗಳೇನು ?
23. ಈ ದಿಸೆಯಲ್ಲಿ ಬೇರೆಬೇರೆ ಭಾಷೆಯ ಕಾದಂಬರಿಗಳ ಬಗೆಗೆ ವಿಚಾರ ಸಂಗ್ರಹ ಮಾಡಿರುವಿರಾ.
24. ಹೋಲಿಕೆಯಲ್ಲಿ, ರಚನೆಯಲ್ಲಿ ಸಾಮ್ಯವೈಷಮ್ಯ ; ಗುಣ-ದೋಷ ಕಂಡು ಬಂದಿದೆಯೇ ?
25. ಬೇರೆಬೇರೆ ದೇಶದ ಇಂತಹ ಕಾದಂಬರಿಗಳ ಬಗೆಗೆ ನಿಮ್ಮಲ್ಲಿ ವಿವರಣೆ ದೊರಕಬಹುದೆ
26. ಇಂತಹ ಕಾದಂಬರಿಗಳ ಅಧ್ಯಯನ ಮುಂದಿನ ಜನಾಂಗದ ಭವಿಷ್ಯತ್ತಿನ ನಿರೂಪಣೆಗೆ ದಾರಿದೀಪವಾಗಬಹುದೆ ?

ವಿಳಾಸ :

ಚಂದ್ರಹಾಸ. ಪಿ.
ಎಂ. ಫಿಲ್. ವಿದ್ಯಾರ್ಥಿ
ಮದುರೈ ಕಾಮರಾಜ ವಿಶ್ವವಿದ್ಯಾನಿಲಯ, 1988
ಮದುರೈ – 625 021

## 11.4 [redacted] ಜಾನಪದ ಕತೆಗಳು

### ಕ್ಷೇತ್ರಕಾರ್ಯ ಸಂದರ್ಶನ - ಮಾದರಿ ಪ್ರಶ್ನಾವಳಿ

**ಸಂದರ್ಶಕ :** ಮೋಹನ ಕುಂಟಾರು, ಕನ್ನಡ ವಿಭಾಗ
ಮದುರೈ ಕಾಮರಾಜ ವಿಶ್ವವಿದ್ಯಾನಿಲಯ, 1988
ಮದುರೈ - 625 021

ಮಾಹಿತಿದಾರನ ಹೆಸರು : ವಯಸ್ಸು :

ಊರು :

ವಿದ್ಯಾಭ್ಯಾಸ : ಕೆಲಸ :

ಮಾಹಿತಿನೀಡುವ ಸ್ಥಳ :

ವೇಳೆ : ದಿನಾಂಕ :

ಸಂದರ್ಶನದ ಅವಧಿ :

1. ಕತೆ ಕೇಳುವುದರಲ್ಲಿ ಅಥವಾ ಹೇಳುವುದರಲ್ಲಿ ನಿಮಗೆ ಆಸಕ್ತಿ ಇದೆಯೇ ?
2. ನೀವು ಕೇಳಿದ ಕತೆಗಳಲ್ಲಿ ನಿಮ್ಮ ಗಮನ ಸೆಳೆದ ಕತೆ ಯಾವುದು ?
3. ಕರ್ನಾಟಕದ ಜಾನಪದ ಕತೆಗಳೊಂದಿಗೆ ಇತರ ದೇಶಗಳ ಹಾಗೂ ಭಾಷೆಗಳ ಜಾನಪದ ಕತೆಗಳ ಪರಿಚಯ ಇದೆಯೇ ? ಇದ್ದರೆ ಯಾವ ರೀತಿ ?
4. ಈ ರೀತಿಯ ಕತೆಯನ್ನು ಮೊದಲಿಗೆ ಕೇಳಿದ್ದು ಯಾವಾಗ ?
5. ಕತೆಯನ್ನು ಯಾರಿಂದ ಕೇಳಿದಿರೋ ಅವರ ವಿವರ ಕೊಡಿ, ಹೆಸರು, ವಯಸ್ಸು, ಊರು, ವಿದ್ಯಾಭ್ಯಾಸ, ಭಾಷೆ ಇತ್ಯಾದಿ.
6. ಆ ಕತೆ ಅವರಿಗೆ ತಿಳಿದುಬಂದ ಬಗೆಯನ್ನು ವಿಚಾರಿಸಿರುವಿರಾ. ವಿವರಣೆ ಕೊಡಿ.
7. ಕತೆಗಳ ಒಟ್ಟು ನೋಟದಲ್ಲಿ ಯಾವ ಸನ್ನಿವೇಶಗಳನ್ನು ಕುರಿತು ಹೆಚ್ಚಾಗಿ ವಿವರಣೆ ಬಂದಿದೆ. ಉದಾ : ಪ್ರಣಯ, ಲೈಂಗಿಕ, ಅದ್ಭುತ ರಮ್ಯ, ಪ್ರಾಣಿ ಸಂಕೇತ ಇತ್ಯಾದಿ.

8. ಈ ವಿಧದ ಕತೆಗಳನ್ನು ಬೇರೆಡೆಗಳಲ್ಲಿ ಬೇರೆಬೇರೆ ವರ್ಗದವರಿಂದ ಕೇಳಿರುವಿರಾ.
9. ಕತೆ ಹೇಳುವ ನಿಮ್ಮ ರೀತಿಗೂ, ಕತೆ ಕೇಳಿದ ಸಂದರ್ಭದಲ್ಲಿಯೂ ಏನಾದರೂ ವ್ಯತ್ಯಾಸ ಕಂಡುಬಂದಿದೆಯೆ ?
10. ಒಂದು ಕತೆಯನ್ನು ಕೇಳಲು/ಹೇಳಲು ಬೇಕಾದ ಅತಿ ಕಡಿಮೆ ಸಮಯ ಹಾಗೂ ಅತಿ ಹೆಚ್ಚು ಸಮಯ ಎಷ್ಟು ?
11. ನಿಮಗೆ ತಿಳಿದಿರುವ ಕತೆಗಳನ್ನು ವರ್ಗೀಕರಣ ಮಾಡಬಹುದೆ. (ಪ್ರಾಣಿ/ಅಜ್ಜಿ/ಅದ್ಭುತ ರಮ್ಯ/ನೀತಿಕತೆ ಇತ್ಯಾದಿ)
12. ಕತೆಗಳಲ್ಲಿ ವ್ಯಕ್ತಿಯ ಬಗೆಗೆ ಗೌರವ/ಪ್ರತಿಷ್ಠೆ/ನಿಂದೆ/ಅವಹೇಳನ ಕಂಡು ಬಂದಿದೆಯೇ ?
13. ಹಾಗೆ ಕಂಡುಬಂದಿದ್ದರೆ ಕತೆ ಹೇಳುವ ವ್ಯಕ್ತಿಗೂ, ಕತೆಯಲ್ಲಿ ನಿರೂಪಿತವಾಗಿರುವ ವಸ್ತುವಿಗೂ ಇರುವ ಸಂಬಂಧವೇ ಕಾರಣವೆ ?
14. ಪರಂಪರೆಯಿಂದ ಬಂದ ಕತೆಗಳಿಗೂ ಆಕಸ್ಮಿಕವಾಗಿ ಕೇಳಿದ ಕತೆಗಳಲ್ಲಿ ಏನಾದರೂ ವ್ಯತ್ಯಾಸ ಕಂಡುಬಂದಿದೆಯೆ ?
15. ಕೇಳಿದ ಎಲ್ಲ ಕತೆಗಳೂ ಮೆಚ್ಚಿಗೆಯಾಗಿವೆಯೇ ? ಇಲ್ಲವೆ ವಿವರಣೆ ಕೊಡಿ.
16. ಕತೆಗಳಲ್ಲಿ ಸಮಕಾಲೀನ ಪ್ರಜ್ಞೆಯ ಛಾಯೆ ಕಂಡುಬಂದಿದೆಯೇ ?
17. ಜಾನಪದ ಕತೆಗಳಲ್ಲಿ ರಾಜಕೀಯ/ಧಾರ್ಮಿಕ/ಐತಿಹಾಸಿಕ ಸಂಗತಿಗಳ ಪಾತ್ರ ವೇನು ?
18. ಈ ತೆರನ ನಿರೂಪಣೆಯಿಂದ ಅನಕ್ಷರಸ್ಥರ ಮೇಲೆ ಪ್ರಭಾವವುಂಟಾಗಿದೆಯೆ ?
19. ಈ ಕತೆಗಳು ಆಸ್ವಾದನೆಯ ದೃಷ್ಟಿಯಿಂದ ವಿದ್ಯಾವಂತ ವರ್ಗ ಹಾಗೂ ಅನಕ್ಷರಸ್ಥರ ಮೇಲೆ ಉಂಟುಮಾಡಿರುವ ಪರಿಣಾಮವೇನು ?
20. ನಿಮಗೆ ತಿಳಿದಂತೆ ಅತಿಹೆಚ್ಚು ಕತೆಗಳನ್ನು ಬಲ್ಲ ವ್ಯಕ್ತಿ ಯಾರಿದ್ದಾರೆ ? ಅವರನ್ನು ಸಂಪರ್ಕಿಸಿದ್ದೀರಾ ?
21. ಕತೆಗಾರರಲ್ಲಿ ವ್ಯಾಪಾರೀ ಮನೋಭಾವವಿದೆಯೋ ? ವಸ್ತು ಸ್ಥಿತಿಯನ್ನು ತಿಳಿದಂತೆ ಹೇಳುವ ಮನಸ್ಸಿದೆಯೋ ? ಗಮನಿಸಿದ್ದೀರಾ.
22. ಜಾನಪದ ಕತೆಗಳನ್ನು ಜನಸಾಮಾನ್ಯರಲ್ಲಿ ಪರಂಪರಾನುಗತವಾಗಿ ಉಳಿದು ಕೊಂಡು ಬೆಳೆದುಬಂದಿರುವ "ಜ್ಞಾನಕೋಶ" ಎನ್ನಬಹುದೆ ?
23. ನಿಮ್ಮ ಅಭಿಪ್ರಾಯ.

## 11.5 [redacted] ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ರಾಜಕೀಯ ಪ್ರಜ್ಞೆ

### ಕ್ಷೇತ್ರಕಾರ್ಯ ಸಂದರ್ಶನ – ಮಾದರಿ ಪ್ರಶ್ನಾವಳಿ

ಸಂದರ್ಶಕ : ರಮೇಶ್‌ಭಟ್ ಎಸ್. ಜಿ.
ಎಂ. ಫಿಲ್. ವಿದ್ಯಾರ್ಥಿ
ಕನ್ನಡ ವಿಭಾಗ
ಮದುರೈ ಕಾಮರಾಜ ವಿಶ್ವವಿದ್ಯಾನಿಲಯ, 1988
ಮದುರೈ – 625 021

ಮಾಹಿತಿದಾರ : ವಯಸ್ಸು ;

ಊರು : ವಿದ್ಯಾಭ್ಯಾಸ :

ಕೆಲಸ :

1. ಪ್ರಾಚೀನ ಕನ್ನಡ ಕಾವ್ಯಗಳ ಬಗೆಗೆ ನಿಮಗೆ ಆಸಕ್ತಿಯಿದೆಯೇ ?
2. ಕಾವ್ಯಗಳಲ್ಲಿ – ಪ್ರಾಚೀನ ಕಾವ್ಯಗಳ ಬಗೆಗೆ ನಿಮ್ಮ ಒಲವಿರುವುದಕ್ಕೆ ಕಾರಣ.
3. ನೀವು ಕೆಲಸ ನಡೆಸುತ್ತಿರುವ ಕ್ಷೇತ್ರ ಯಾವುದು ?
4. ಯಾವ ಕಾರಣಕ್ಕಾಗಿ ನೀವು ಪ್ರಾಚೀನ ಕಾವ್ಯವನ್ನು ಮೆಚ್ಚಿಕೊಂಡಿರೋ ಅದರ ಬಗೆಗೆ ನಿಮ್ಮ ದೃಷ್ಟಿಯೇನು.
5. ಪ್ರಾಚೀನ ಕವಿಗಳು - ಸಮಕಾಲೀನ ಜೀವನದಿಂದ ವಂಚಿತರಾಗಿದ್ದರು ಎನಿಸುವುದಿಲ್ಲವೆ ?
6. ಪ್ರಾಚೀನ ಕವಿಗಳಲ್ಲಿ ಬಹುಮಂದಿ ಹಣಕ್ಕಾಗಿ/ಕೀರ್ತಿಗಾಗಿ/ಆಶ್ರಯದಾತನ ಋಣ ಸಂದಾಯಕ್ಕಾಗಿ ಕಾವ್ಯ ಬರೆದರು ಎನ್ನಬಹುದೆ ವಿವರಣೆ.
7. ಆಸ್ಥಾನ ಕವಿಗಳಾಗಿದ್ದ ಬಹಳಷ್ಟು ಕವಿಗಳು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದರು ಎನ್ನಬಹುದೇ.
8. ಇದುವರೆಗೆ ಎಷ್ಟು ಪ್ರಾಚೀನ ಕಾವ್ಯ ಅಧ್ಯಯನ ನಡೆಸಿರುವಿರಿ.
9. ಅದನ್ನು ಕುರಿತಂತೆ ಲೇಖನಗಳೇನಾದರೂ ಬರೆದಿದ್ದರೆ ವಿವರಣೆ ಕೊಡಿ.

0. ಪ್ರಾಚೀನ ಕಾವ್ಯಗಳಲ್ಲಿ ವಸ್ತುವಿಗಿಂತ ಹೊರತಾದ – ರಾಜಕೀಯ, ಸಾಮಾಜಿಕ ಸಂಗತಿಗಳನ್ನು ಗಮನಿಸಿದ್ದೀರಾ ?

11. ನೀವು ಗಮನಿಸಿದ ಎಷ್ಟು ಕವಿಗಳಲ್ಲಿ ರಾಜಕೀಯ ಪ್ರಜ್ಞೆಯನ್ನು ಗುರುತಿಸಿದ್ದೀರಿ ?

2. ಕಾವ್ಯದಲ್ಲಿ ರಾಜಕೀಯ ವಿಚಾರ ಮೂಡಿಬರಲು ಅವರು ಆಯಾ ರಾಜರುಗಳ ಆಶ್ರಯದಲ್ಲಿದ್ದುದೇ ಕಾರಣವಾಗಿರಬಹುದೇ ?

3. ಪಂಪ, ರನ್ನ, ಪೊನ್ನ ಇವರಲ್ಲಿ ರಾಜಕೀಯ ಪ್ರಜ್ಞೆ ಯಾರಲ್ಲಿ ಹೆಚ್ಚು ಕಂಡು ಬಂದಿದೆ ?

4. ಅವರುಗಳ ಅಭಿವ್ಯಕ್ತಿಯಲ್ಲಿ ಸಮಾನತೆ, ಸಹಜತೆ, ಸತ್ಯನಿಷ್ಠತೆ ನಿರೂಪಿತವಾಗಿದೆಯೇ ?

5. ಅಭಿವ್ಯಕ್ತಿಯಲ್ಲಿನ ವ್ಯತ್ಯಾಸ, ಗುಣ ದೋಷ ಗುರುತಿಸಿರುವಿರಾ ?

6. ಇತಿಹಾಸ–ಪುರಾಣಗಳನ್ನು ಮೇಳೈಸಿ ಹೇಳಿರುವುದು ಅವರ ರಾಜಕೀಯ ಅರಿವನ್ನು ಹೆಚ್ಚಿಸಲು/ಪ್ರತಿಬಿಂಬಿಸಲು ಸಹಾಯಕವಾಗಿದೆಯೇ ?

7. ಕಾವ್ಯದಲ್ಲಿನ ಸಾಹಿತ್ಯಿಕ ಧೋರಣೆಗಳಿಗೆ ಇತಿಹಾಸ ವಿಚಾರಗಳು, ವ್ಯಕ್ತಿ ವಿಚಾರಗಳು ಪೂರಕವಾಗಿ ಬಂದಿರಬಹುದಲ್ಲವೆ ?

8, ಪುರಾಣವನ್ನೇ ಪ್ರಧಾನವನ್ನಾಗಿಸಿಕೊಂಡ, ಇತಿಹಾಸ ಸ್ಪರ್ಶ ವಿಲ್ಲದ ಕಾವ್ಯಗಳಲ್ಲಿ ರಾಜಕೀಯ ಪ್ರಜ್ಞೆ ಹೇಗೆ ಬಿಂಬಿತವಾಗಿದೆ ?

9. ಪ್ರಾಚೀನ ಕಾವ್ಯಗಳಲ್ಲಿನ ರಾಜಕೀಯ ಪ್ರಜ್ಞೆಯಲ್ಲಿ ನಮ್ಮ ದೇಶದ ಧಾರ್ಮಿಕ ಗ್ರಂಥಗಳು ಮುಖ್ಯ ಪಾತ್ರವಹಿಸಿವೆಯೆಂದು ಹೇಳಬಹುದೆ ?

0. ಪ್ರಾಚೀನ ಕವಿಗಳಲ್ಲಿ ಕೆಲವರು ಸ್ವತಃ ಕವಿಯೂ, ಕಲಿಯೂ ಎರಡೂ ಆಗಿದ್ದರು–ಎಂಬುದರ ಬಗೆಗೆ ನಿಮ್ಮ ಅಭಿಪ್ರಾಯವೇನು ?

1. ಪಂಪನನ್ನು ಬಿಟ್ಟರೆ ಉಳಿದ ಕವಿಗಳ ಕಾವ್ಯಗಳಲ್ಲಿ ರಾಜಕೀಯ ಪ್ರಜ್ಞೆ ಅಷ್ಟು ಪ್ರಭಾವಶಾಲಿಯಾಗಿ ಮೂಡಿಬಂದಿಲ್ಲ ಎನ್ನಬಹುದೆ ?

2. ಪಂಪ–ರನ್ನ–ಪೊನ್ನರ ಕಾವ್ಯಗಳಲ್ಲಿ ರಾಜಕೀಯ ಪ್ರಜ್ಞೆ ಹೇಗೆ ಮೂಡಿಬಂದಿದೆ ಎಂಬುದನ್ನು ಸೂಕ್ಷ್ಮವಾಗಿ ಪರಿಚಯ ಮಾಡಿಕೊಡಬಲ್ಲಿರಾ ?

3. ನಿಮ್ಮ ಅಭಿಪ್ರಾಯ ?

## 11.6 "ಕಾವೇರಿಕಾನ ಕೆ.ವಿ. ಕೃಷ್ಣಭಟ್ಟರು; ಬದುಕು-ಬರಹ"

ಈ ಕುರಿತು ವಿಚಾರಗಳನ್ನು ಸಂಗ್ರಹಿಸುವ ಸಲುವಾಗಿ ಹಾಕಿಕೊಂಡ ಪ್ರಶ್ನಾವಳಿಯ ಮಾದರಿಯನ್ನು ಇಲ್ಲಿ ಕೊಡಲಾಗಿದೆ.

**ಪ್ರಶ್ನೆಗಳು :** ಡಾ॥ ಹರಿಕೃಷ್ಣ ಭರಣ್ಯ, ಉಪನ್ಯಾಸಕ, ಕನ್ನಡ ವಿಭಾಗ
ಮದುರೈ ಕಾಮರಾಜ ವಿಶ್ವವಿದ್ಯಾನಿಲಯ
ಪಲ್‌ಕಲೈನಗರ, ಮದುರೈ – 625 021

### ಪ್ರಶ್ನಾವಳಿ

**ಭಟ್ಟರ ಬದುಕಿನ ಬಗೆಗೆ :**

1. ಕಾವೇರಿಕಾನ ಕೃಷ್ಣಭಟ್ಟರನ್ನು ನೀವು ಮೊದಲ ಬಾರಿ ಕಂಡದ್ದು ಎಲ್ಲಿ ? ಯಾವಾಗ ?
2. ಅವರ ಭೆಟ್ಟಿಯಾಗಿದ್ದಾಗ ನಿಮ್ಮ ಹಾಗೂ ಅವರ ವಯಸ್ಸು (ಸುಮಾರು) ಎಷ್ಟಿರಬಹುದು ?
3. ಭಟ್ಟರೂ ನೀವೂ ಸಾಮಾನ್ಯವಾಗಿ ಯಾವ ವಿಷಯದ ಕುರಿತು ಮಾತನ್ನಾಡುತ್ತಿದ್ದಿರಿ ?
4. ನೀವು ಅವರ ವಿದ್ಯಾರ್ಥಿಗಳೇ / ಸಹಪಾಠಿಗಳೇ/ಸಂಬಂಧಿಕರೇ/ಮಿತ್ರರೇ/ ಸಹೋದ್ಯೋಗಿಗಳೇ ವಿವರ ತಿಳಿಸುತ್ತೀರಾ ?
5. ವಿದ್ಯಾರ್ಥಿ/ಸಹೋದ್ಯೋಗಿ/ಗಳಾಗಿದರೆ ಯಾವ ಶಾಲೆಯಲ್ಲಿ ? ಯಾವ ವರ್ಷ/ಎಷ್ಟು ವರ್ಷಗಳು ಇತ್ಯಾದಿ ?
6. ಸಂಬಂಧಿಕರಾಗಿದ್ದರೆ ಯಾವ ರೀತಿ ?
7. ವಿದ್ಯಾರ್ಥಿಗಳಾಗಿದ್ದರೆ, ಯಾವ ಪಾಠಗಳನ್ನು ಅವರು ಮಾಡಿದ್ದರು ? ಭಾಷೆ/ಸಾಹಿತ್ಯ/ಇತರೆ ?
8. ಅವರು ಪಾಠ ವಿವರಿಸುತ್ತಿದ್ದ ಬಗೆಯ ಕುರಿತು ಏನಾದರೂ ನೆನಪಿದೆಯೆ ?
9. ಅವರು ಹಾಸ್ಯ/ಗಂಭೀರ ಪ್ರವೃತ್ತಿಯವರೇ ?
10. ಅವರಲ್ಲಿದ್ದಿರಬಹುದಾದ ವಿಶೇಷ ಗುಣಗಳು/ಚಟಗಳು ಏನಾದರೂ ನೆನಪಿದೆಯೆ ?

11. ಅವರು ಅಧ್ಯಾಪಕರಾಗಿ / ಸಹೋದ್ಯೋಗಿಯಾಗಿ / ಮಿತ್ರರಾಗಿ ನಿಮ್ಮಲ್ಲಿ ಅಚ್ಚೊತ್ತಿ ನಿಂತಿರಬಹುದಾದ ವಿಚಾರಗಳೇನಾದರೂ ಇವೆಯೆ ?
12. ಅವರ ನಡೆ/ನುಡಿ/ಮಾತುಗಾರಿಕೆಗಳ ಬಗೆಗೇನಾದರೂ ನಿಮಗೆ ಗೊತ್ತಿದೆಯೆ ?
13. ಅವರ ಮಡದಿ, ಮಕ್ಕಳು, ಮೊಮ್ಮಕ್ಕಳ ಬಗೆಗೇನಾದರೂ ಗೊತ್ತಿದೆಯೆ ?
14. ಭಟ್ಟರು ಮನೆಯಲ್ಲಿ ಹೆಂಡತಿ/ಮಕ್ಕಳೊಂದಿಗೆ ವ್ಯವಹರಿಸುತ್ತಿದ್ದ ಬಗೆಯನ್ನು ನೀವು ಕಂಡ ರೀತಿ ಹೇಳುವಿರಾ ?
15. ಕೃಷ್ಣಭಟ್ಟರ ತಂದೆ-ತಾಯಿಯರ ಬಗೆಗೆ ನಿಮಗೇನಾದರೂ ತಿಳಿದಿದೆಯೆ ? ಅಥವಾ ಅವರು ಹೇಳಿರಬಹುದಾದ ವಿಚಾರಗಳೇನಾದರೂ ನಿಮ್ಮ ನೆನಪಿನಲ್ಲಿದೆಯೆ ?
16. ಭಟ್ಟರ ಹುಟ್ಟಿನ ದಿನ/ಮದುವೆ/ನಿಧನರಾದ ದಿನ/ವರ್ಷ ನಿಮಗೇನಾದರೂ ಗೊತ್ತೇ ?
17. ನಿಮ್ಮ ಹಾಗೂ ಅವರ ಕೊನೆಯ ಭೇಟಿಯ ದಿನ/ಘಟನೆ ?
18. ಅವರ ಭಾಷಣ/ಪಾಠ/ಪ್ರವಚನ ಯಾವುದಾದರೂ ನೀವು ಕೇಳಿದ್ದೀರಾ ? ವಿಶೇಷತೆಗಳನ್ನೇನಾದರೂ ಗಮನಿಸಿದ್ದೀರಾ ?
19. ಅವರ ಬದುಕಿನ ಬಗೆಗೆ ನೀವು ಇನ್ನೇನಾದರೂ ಹೇಳಬಲ್ಲಿರಾ ?

**ಬರಹಗಳ ಬಗೆಗೆ :**

20. ಅವರ ಎಷ್ಟು ಕೃತಿ/ರಚನೆಗಳನ್ನು ನೀವು ಓದಿದ್ದೀರಿ ? ಹೆಸರಿಸಬಹುದೆ ?
21. ಅವರ ಉತ್ತಮ ಕೃತಿ/ರಚನೆ ನಿಮ್ಮ ಅಭಿಪ್ರಾಯದಲ್ಲಿ ಯಾವುದು ?
22. ಅವರ "ಕರ್ಣರಸಾಯನಂ" ಅಥವಾ "ಗದಾಯುದ್ಧ" ಸಂಗ್ರಹಗಳು ನಿಮಗೆ ಯಾವುದಾದರೂ ತರಗತಿಗೆ ಪಠ್ಯವಾಗಿತ್ತೆ ?
23. ಈ ಕೃತಿಗಳ ಬಗ್ಗೆ ನಿಮಗೇನನ್ನಿಸುತ್ತದೆ ?
24. ಅವರ "ಪಂಚಾಮೃತಂ" ಓದಿದ್ದೀರಾ ?
25. ಪಂಚಾಮೃತದಲ್ಲಿ ನೀವು ಭಟ್ಟರ ಸ್ವಂತಿಕೆಗಳನ್ನೇನಾದರೂ ಗುರುತಿಸಿದ್ದೀರಾ ?
26. ಇದರಲ್ಲಿನ ಅವರ ಸ್ವತಂತ್ರ ಕವಿತಾ ರಚನೆಗಳಲ್ಲಿ ನಿಮಗೆ ಮೆಚ್ಚಿದ ರಚನೆ ಯಾವುದು ? ಕಾರಣ ಹೇಳಬಲ್ಲಿರಾ ?
27. ಇದರಲ್ಲಿನ ಹರಟೆಗಳ ಹೂರಣಗಳನ್ನು ಅರ್ಥಮಾಡಿಕೊಂಡಿದ್ದೀರಾ ?
28, ಆ ಕಾಲದ ಇನ್ನಿತರ ಹಾಸ್ಯ ಬರಹಗಾರರ ರಚನೆಗಳನ್ನು ಓದಿದ್ದೀರಾ ?
29. ಹಾಗಿದ್ದರೆ ಭಟ್ಟರ ಹರಟೆಗಳಲ್ಲಿ ಪ್ರತ್ಯೇಕತೆಗಳನ್ನು ಗುರುತಿಸಿದ್ದೀರಾ ?
30. ಪಂಚಾಮೃತದಲ್ಲಿ ಅವರು ಕನ್ನಡ ಸಾಹಿತ್ಯದ ಬೆಳವಣಿಗೆಗಳ ಬಗೆಗಿನ ತಮ್ಮ

ಆಸಕ್ತಿ/ಕಳಕಳಿಗಳನ್ನು ವ್ಯಕ್ತಪಡಿಸಿದ ಬಗೆಯನ್ನು ಗಮನಿಸಿದ್ದೀರಾ ? ನಿಮ್ಮ ಅಭಿಪ್ರಾಯವೇನು ?

31. ಅಂದಿನ ಕಾಲದ ಹಿನ್ನೆಲೆಯಲ್ಲಿ ಅವರ ಸಾಹಿತ್ಯ ಕೃತಿಗಳನ್ನು ನೋಡಿದರೆ ಅವರ ಸ್ಥಾನದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

32. ಭಟ್ಟರ ವಿಚಾರಧಾರೆಗಳ ಬಗ್ಗೆ ನಿಮ್ಮ ಅನಿಸಿಕೆಗಳೇನು ?

33. ಭಟ್ಟರ ಬೇರಾವುದೇ ಸೃಜನಶೀಲ ರಚನೆಗಳಿವೆಯೆ ? ನಾಟಕ/ಕತೆ/ಇತ್ಯಾದಿ ?

34. "ಎಲ್ಲರಿಗೂ ಹುಚ್ಚು" ನಾಟಕದ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿಸುತ್ತೀರಾ ? ಇದಕ್ಕೆ ಸಮಕಾಲೀನತೆಯೇನಾದರೂ ಇದೆಯೇ ?

35. ಭಟ್ಟರ ಒಟ್ಟು ಪ್ರಕಟಿತ ಕೃತಿಗಳು ಎಷ್ಟು ಎಂಬುದು ನೆನಪಿದೆಯೆ ?

36. ಭಟ್ಟರ ಹೆಚ್ಚಿನ ಕೃತಿಗಳೂ ಅವರ ಮರಣಾನಂತರವಷ್ಟೇ ಪ್ರಕಟವಾಗಿವೆಯೇ? ಏನಿದಕ್ಕೆ ಕಾರಣವೆಂದು ಯೋಚಿಸಿದ್ದೀರಾ ?

37. ಭಟ್ಟರ ಪಾಂಡಿತ್ಯ, ರಸಿಕತೆ, ಸೃಜನಶೀಲತೆ, ಗ್ರಂಥ ಸಂಪಾದಕತ್ವ-ಮೊದಲಾದ ಬಗೆಗೆ ನಿಮ್ಮ ಅನುಭವ, ಅನಿಸಿಕೆಗಳೇನು ?

38, ಭಟ್ಟರ ಲೇಖನ/ರಚನೆಗಳನ್ನು ಯಾವುದಾದರೂ ಪತ್ರಿಕೆಗಳಲ್ಲಿ ಓದಿದ ನೆನಪಿದೆಯೇ ? ವಿವರ ತಿಳಿಬಹುದೆ ?

39. ಅವರು ಸಾಹಿತ್ಯ/ಅಭಿವ್ಯಕ್ತಿ/ಪ್ರಕಟಣೆ ಮೊದಲಾದ ಬಗೆಗೆ ಎಂದಾದರೂ ತಮ್ಮ ಅಭಿಪ್ರಾಯಗಳನ್ನು ಹೇಳಿದ್ದಿದೆಯೆ ?

40. ಭಟ್ಟರು ಜನಪ್ರಿಯರಾಗದೇ ಹೋದುದು ಯಾವ ಕಾರಣಕ್ಕಾಗಿ ಎಂಬುದನ್ನು ಯೋಚಿಸಿದ್ದೀರಾ ?

41. ಪ್ರಕಟಣೆ/ಪ್ರಚಾರ ಪ್ರಿಯತೆಗಳ ಬಗೆಗೆ ಭಟ್ಟರ ಪ್ರತಿಕ್ರಿಯೆಗಳೇನಿದ್ದವು ಎಂಬುದು ತಮಗೇನಾದರೂ ಗೊತ್ತಿದೆಯೆ ?

42. ಭಟ್ಟರಿಗೆ ಬೇರೆ ನಿರ್ದಿಷ್ಟವಾದ ಆಸೆ-ಆಕಾಂಕ್ಷೆಗಳು ಏನಾದರೂ ಇದ್ದುವೇ ?

43. ಕಾವೇರಿಕಾನ ಕೃಷ್ಣಭಟ್ಟರನ್ನು ಬೇರಾರಾದರೂ ಲೇಖಕರು – ವಿಮರ್ಶಕ/ಸಂಶೋಧಕ/ಸಾಹಿತ್ಯ-ಕವಿ ಚರಿತ್ರೆಕಾರರು ಗುರುತಿಸಿದ್ದನ್ನು ನೀವು ನೋಡಿದ್ದಿದೆಯೆ ?

44. ಭಟ್ಟರ ಅಪ್ರಕಟಿತ ಬರಹಗಳ ಬಗೆಗೇನಾದರೂ ಗೊತ್ತಿದೆಯೆ ?

45. ಭಟ್ಟರನ್ನು ಹತ್ತಿರದಿಂದ ಬಲ್ಲ ಬೇರೆ ಯಾರಾದರೂ ನಿಮಗೆ ಗೊತ್ತೆ ?

46. ಭಟ್ಟರ ಬದುಕು/ಸಾಹಿತ್ಯ ಹಾಗೂ ಇನ್ನಿತರ ಬಗೆಗೆ ತಮಗೆ ಗೊತ್ತಿರಬಹುದಾದ ವಿಚಾರಗಳನ್ನು ತಿಳಿಸುತ್ತೀರಾ ?

## 11.7 ಅಂಚೆ ಮೂಲಕ ಸಂದರ್ಶನ

### ಮಾದರಿ ಪ್ರಶ್ನೆಗಳು

**ವ್ಯಾಸರಾಯ ಬಲ್ಲಾಳರ ಕಾದಂಬರಿಗಳು :**

ಗೆ,

ಶ್ರೀ ..........................................................................................................

ಬೆಂಗಳೂರು/ಧಾರವಾಡ/ಮೈಸೂರು/ಗುಲ್ಬರ್ಗ/ಮುಂಬಯಿ/ಮದ್ರಾಸ್/ಉಡುಪಿ

ಮಾನ್ಯರೇ,

ಶ್ರೀ ನಿಡಂಬೂರು ವ್ಯಾಸರಾಯ ಬಲ್ಲಾಳರ ಕಾದಂಬರಿಗಳ ಬಗ್ಗೆ ಅಧ್ಯಯನ ನಡೆಸುತ್ತಿರುವ ನಾನು, ನನ್ನ ಅಧ್ಯಯನಕ್ಕೋಸ್ಕರ ಅವರ ಕಾದಂಬರಿಗಳ ಬಗ್ಗೆ ಸಾಹಿತ್ಯಾಸಕ್ತರಾದ ತಮ್ಮಿಂದ ಕೆಲವು ಮಾಹಿತಿಗಳನ್ನು, ಅಭಿಪ್ರಾಯಗಳನ್ನು ತಿಳಿಯ ಬಯಸುತ್ತೇನೆ. ದಯವಿಟ್ಟು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ ಅಂಚೆಯ ಮೂಲಕ ನನಗೆ ಕಳುಹಿಸಬೇಕಾಗಿ ವಿನಂತಿಸಿಕೊಳ್ಳುತ್ತೇನೆ.

ಇಂತಿ ವಿಶ್ವಾಸಪೂರ್ವಕ,
**ವರದರಾಜ ಚಂದ್ರಗಿರಿ**

**ವಿಳಾಸ :**

ವರದರಾಜ ಚಂದ್ರಗಿರಿ
ಎಂ. ಫಿಲ್, ವಿದ್ಯಾರ್ಥಿ, ಕನ್ನಡ ವಿಭಾಗ
ಮದುರೈ ಕಾಮರಾಜ ವಿಶ್ವವಿದ್ಯಾನಿಲಯ
ಪಲ್‌ಕಲೈ ನಗರ, ಮದುರೈ 625 021.

ಮಾಹಿತಿ ನೀಡುವವರ ಪರಿಚಯ ಪತ್ರ :

1. ಹೆಸರು :
2. ವಯಸ್ಸು :
3. ಗಂಡಸು/ಹೆಂಗಸು
4. ಊರು/ಜಿಲ್ಲೆ /ರಾಜ್ಯ
5. ಉದ್ಯೋಗ
6. ವಿದ್ಯಾಭ್ಯಾಸ

## ಪ್ರಶ್ನೆಗಳು

1. ಕಾದಂಬರಿಯಲ್ಲಿ ಆಸಕ್ತಿಯಿದೆಯೇ ?
2. ಯಾವ ರೀತಿಯ ಕಾದಂಬರಿಗಳನ್ನು ಹೆಚ್ಚು ಇಷ್ಟಪಡುತ್ತೀರಿ ? ಏಕೆ ?
3. ಸುಮಾರು ಎಷ್ಟು ಕಾದಂಬರಿಗಳನ್ನು ಓದಿರುವಿರಿ ?
4. ಕಾದಂಬರಿಕಾರರಾಗಿ ವ್ಯಾಸರಾಯ ಬಲ್ಲಾಳರನ್ನು ಗಮನಿಸಿದ್ದೀರಾ ?
5. ಬಲ್ಲಾಳರ ಯಾವೆಲ್ಲ ಕೃತಿಗಳನ್ನು ಓದಿದ್ದೀರಿ ?
6. ನೀವು ಇಷ್ಟ ಪಟ್ಟ ಅವರ ಕಾದಂಬರಿಗಳು ಯಾವುವು ? ಏಕೆ ?
7. ಇತರ ಕಾದಂಬರಿಕಾರರಿಗಿಂತ ಬಲ್ಲಾಳರ ಬರವಣಿಗೆಯಲ್ಲಿ ವಿಶಿಷ್ಟತೆಯನ್ನೇನಾದರೂ ಗುರುತಿಸಿದ್ದೀರಾ ? ಯಾವುವು ?
8. ಬಲ್ಲಾಳರ ಕಾದಂಬರಿ ಓದುವಾಗ ನೀವು ಓದಿದ ಬೇರೆ ಕಾದಂಬರಿಗಳು ನೆನಪಿಗೆ ಬರುತ್ತವೆಯೇ ? ಯಾವುದು ? ಏಕೆ.
9. ಬಲ್ಲಾಳರ ಕಾದಂಬರಿಗಳನ್ನು ಅಧ್ಯಯನದ ದೃಷ್ಟಿಯಿಂದ ಯಾವ ಗುಂಪಿಗೆ ಸೇರಿಸಬಹುದು ?
10. ಬಲ್ಲಾಳರ ತಂತ್ರ, ನಿರೂಪಣೆ, ಭಾಷೆಗಳ ಬಗ್ಗೆ ನಿಮ್ಮ ಅನಿಸಿಕೆ ಏನು ?
11. ಅವರ ಕಾದಂಬರಿಗಳು ನಿಮ್ಮ ಮೇಲೆ ಏನಾದರೂ ಪ್ರಭಾವ ಬೀರಿದೆಯೇ ? ಹೇಗೆ ?
12. ಓರ್ವ ಉತ್ತಮ ಕಥೆಗಾರರೂ ಆಗಿರುವ ಬಲ್ಲಾಳರ ಸಣ್ಣ ಕಥೆಗಳನ್ನು ಗಮನಿಸಿದ್ದೀರಾ ?
13. ವಸ್ತುವಿನ ದೃಷ್ಟಿಯಿಂದ ಅವರ ಕಾದಂಬರಿಗಳಿಗೂ ಸಣ್ಣ ಕಥೆಗಳಿಗೂ ಇರುವ ಹೋಲಿಕೆ, ಭಿನ್ನತೆ ಗುರುತಿಸಬಹುದೆ ?
14. ಬಲ್ಲಾಳರ ಕೃತಿಯನ್ನೋದಿದಾಗ ಅವರ ಮೇಲೆ ಯಾವುದಾದರೂ ವ್ಯಕ್ತಿಯ/ಸಿದ್ಧಾಂತದ ಪ್ರಭಾವ ಬೀರಿರುವ ಹಾಗನ್ನಿಸುತ್ತದೆಯೇ ?
15. ಒಟ್ಟಿನಲ್ಲಿ ಕನ್ನಡ ಕಾದಂಬರಿಗಳ ಗುಣಮಟ್ಟದ ಬಗ್ಗೆ ನಿಮಗೇನನ್ನಿಸುತ್ತದೆ ?
16. ನೀವೇನಾದರೂ ಕಾದಂಬರಿಯ ಅಥವಾ ಇನ್ನಾವುದೇ ಸಾಹಿತ್ಯ ಪ್ರಕಾರದ ರಚನೆಯಲ್ಲಿ ತೊಡಗಿರುವಿರಾ. ವಿಶೇಷ ಸಲಹೆಗಳಿದ್ದರೆ ತಿಳಿಸಿ ?

— o —

# ಅನುಬಂಧ

## ಕೆಲವು ಉದ್ಧೃತಗಳು (Quotations)

**Reserch :**

1. 'Research is a careful inquiry or examination to discover new information or relationships and to expand and to verify existing knowledge'.

**—Francis Rummel**

[P.3 An Introduction to Research Methods in Social Sciences. By Dr. Pattanshetty and others.]

2. 'Research, Simply put, is an endeavour to discover intellectual and practical answers to problems through the application of Scientific Methods to the Knowable Universe.'

[P.1 Methodology & Techniques of Social Research wilkinson and Bhandarkar.]

3. Meaning of Research : 'The websters International Dictionary proposes a very inclusive definition of Research as a careful critical inquiry or examination in seeking facts or principles ; diligent investsgation in order to ascertain something.'

[P.8 M & T S R : Wilkinson & Bhandarkar]

4. "ಸಂಶೋಧನೆ' ಎಂದರೆ ಶುದ್ಧಿಗೊಳಿಸು, ತಿದ್ದು ಎಂದರ್ಥ; ಪರ್ಯಾಯವಾಗಿ ಇದಕ್ಕೆ 'ಹುಡುಕು' ಎಂದರ್ಥ ಬಂದು ಈ ಅರ್ಥವೇ ಈಗ ಪ್ರಬಲವಾಗಿದೆ. ಸಂಶೋಧನೆಯು ಹುಡುಕುವಿಕೆಯನ್ನು ಸೂಚಿಸುತ್ತದೆ. ಅಂದರೆ ಸಂಶೋಧನೆ ಯೆನ್ನುವುದು ಸತ್ಯವನ್ನು ಕಾಣಲು ಮಾಡುವ ಒಂದು ಪ್ರಾಮಾಣಿಕ ಪ್ರಯತ್ನ".

[ಸಂಶೋಧನೆ : ಪು. 1, 2. ಡಾ॥ ಎಂ. ಚಿದಾನಂದಮೂರ್ತಿ]

5. "ಸಂಶೋಧನೆಯೆನ್ನುವುದು ಸತ್ಯವನ್ನು ಕಾಣಬೇಕೆಂಬ ಉತ್ಕಟ ಅಪೇಕ್ಷೆಯುಳ್ಳ ವ್ಯಕ್ತಿಯೊಬ್ಬನ ಒಂದು ಪ್ರಾಮಾಣಿಕ ಪ್ರಯತ್ನ".

[P.3 ಸಂಶೋಧನೆ : ಡಾ॥ ಚಿದಾನಂದಮೂರ್ತಿ]

## Hypotheses :

1. The only difference between gathering data without a hypotheses and gathering them with one is that in the latter case, we deliberately recognize the limitations of our senses and attempt to reduce their falliability by limiting our field of investigation, so as to prevent greater Concentration of attention on particular aspects which past experience leads us to believe are insignificant for our purpose.'

**—Lundberg**

[P.65 M. & T. S. R : Wilkinson & Bhandarkar]

2. 'We cannot take single step forword in any inquiry unless we begin with a suggested explanation or solution of the difficulty which originated it. Such tentative explanation are suggested to us by something in the subject matter and by our previous knowledge when they are formulated as propositions, they are called hypotheses.'

**—Cohen and Nagel**

[P.66 M. & T.S.R.]

3. The guesees he makes are the hypotheses which either solve the problem or guide him in further investigation.'

**—Werkmeister**

[P.66 M. & T.S.R.]

4. 'Hypotheses reflect the research worker's guess as to the probable out come of his experiment and they place clear and specific goals before the researcher and provide him

with a basis for selections samples and reserch procedures to meet these goals.'

**—Walter R. Borg**

[P.62 I.R.M.S. Pattanashetty & Others]

5. 'It has been defined as a tentative solution posed on a cursory observation of Known and available data, and adopted provisionally to explain certain events and to guide in the investigation of others. It is in fact, a possible solution to the problem'.

**—M. H. Gopal**

[P. 63 I.R.M.S. Pattanashetty & Others]

## Research Design :

1. 'A Research Design is the arrangement of conditions for collection and analysis of data in a manner that aims to combine relevance to the Research purpose with economy in procedure'.

**—Selltiz, Jahoda, Deutsch and Cook**

[P. 87 M. & T. S. R.]

2. 'The idealized research design is concerned with specifying the optimum research procedure that could be followed were there no practical restriction'.

**—Ackoff**

[P. 88 M. & T. S. R.]

3. 'Research Design is not a highly specific plan to be followed without deviations, but rather a series of guide posts to keep one headed in the right direction'.

**—Selltiz**

[P. 91 M. & T. S. R.]

4. 'Research Design is the logical and systematic planning and directing of a piece of Research'.

**—P. V. Young**

[P. 70 I.R.M.S.]

## Observation :

1. 'The Primary Research instrument would seem to be the observing human intelligence trying to make sense out of human experience'.

**—John Dollard**

[P. 168 M. & T. S. R.]

2. A Systematic and deliberate study through the eye of spontaneous occurence at the time they occur'.

**—P. V. Young**

[P. 137 I.R.M.S.]

3. 'Observation includes the most casual uncontrolled experiences as well as the most exact film records of laboratory experimentation'.

**—Goode & Hatt**

[P. 138 I.R.M.S.]

4. 'The purpose of observation is to perceive the nature and extent of significant interrelated elements within complex Social Phenomena, Culture Patterns or Human Conduct'.

**—P. V. Young**

[P. 138 I.R.M.S.]

5. 'The reliability and fullness of the sensory reactions to the situation depend on how keen the sensory organs are and therefore the researcher should be physically in top condition'.

**—M. H. Gopal**

[P. 138 I.R.M.S.]

## Interview :

1. 'If you want to know how people feel, what they experience and what they remember, what their emotions and motives are like, and the reasons for acting as they do – why not ask them ?'

**—Selltiz**

[P. 183 M. & T.S R.]

2. 'The advantage of unstructured response, is to be unprecise ; that they permit the unexpected response'.

**—Galtung**

[P. 186 M. & T.S.R.[

3. 'An effective informal Verbal and non-verbal Conversation, initiated for specific purposes and focused on certain planned content areas'.

**—Young**

[P. 123 I.R.M.S.]

4. 'The objectives of Interview may be exchange of ideas and experiences, eliciting of information pertaining to a wide range of data in which the interviewee may wish to reherse his past, define his present, and canvass his future possibilities, As the vary term implies, interviewing is an interactional process. It is mutual view of each other'.

**—P. V. Young**

[P. 123 I.R.M.S.]

## Questionnaire :

1. 'Interview is like a Musical Symphony ; waves after waves of sound iminging upon the audience. The Questionnaire, on the other hand, has been likened to presentation before subjects of stimuli in the manner of a painting ; Various shades of colour spread over the canvass

In other words, the interview method involves presentation, one after the other of stimuli in the continuum of time whereas in the questionnaire, these are presented in space'.

—**Galtung**

[P. 200 M. & T. S. R.]

2. 'The amount of reading attention and writing skill required for most questionnaires is much greater than is implied, by a minimum definition of 'literate'. For many who are able to read and write, neither burden is assumed willingly or easily'.

—**Goode and Hatt**

[P. 120 I.R.M.S.]

3. 'The mail questionnaire is inappropriate where spontaneous answers are wanted : where it is importent that the views of one person only are obtained, un-influenced by discussion with others : and where it is essential that one particular person in each house hold fills in the questionnaire and no one else'.

—**C. A. Moser**

[P. 121 I.R.M.S.]

4. 'The Questionnaire is not an effective research tool for any, but a highly select group of respondents'.

**Goode & Hatt**

[P. 122 I.R.M.S.]

# ಸಹಾಯಕ ಗ್ರಂಥಗಳು


**ಕನ್ನಡ.**

1. ಸಂಶೋಧನೆ : ಡಾ|| ಎಂ. ಚಿದಾನಂದಮೂರ್ತಿ 1967.
   ಪ್ರ : ಕನ್ನಡ ಅಧ್ಯಯನ ಸಂಸ್ಥೆ
   ಮೈಸೂರು ವಿಶ್ವವಿದ್ಯಾನಿಲಯ

2. ಸಾಮಾಜಿಕ ಸಂಶೋಧನಾ ವಿಧಾನಗಳು. ಆರ್. ಇಂದಿರಾ
   ವಿದ್ಯಾಸಾಗರ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
   ಚಾಮರಾಜಪುರ, ಮೈಸೂರು - 4

**ಇಂಗ್ಲೀಷ್**

1. Methodology and Techniques of Social Research 1987.
   -Wilkinson of Bhandarkar
   Pub : Himalaya Publishing House
   Ramdoot, Dr. Bhalerao Marg
   Girgaon, Bombay - 400 004

2. An Introduction to Research Methods in Social Sciences, by Dr. C. C. Pattanshetty, Dr. S. Nakkiran, Dr. A. John Winfred, Dr. V. Kulandaiswamy,
   Pub : Rainbow Publication, Coimbature - 30
   Tamil Nadu.

3. Thesis and Assighnment Writing
   by Anderson, Durston, Poole
   Pub : Wiley Eastern Limited
   New Deihi, Bangalore, Bombay, Calcutta.

**ತಮಿಳು :**

1. ಇಲಕ್ಕಿಯ ಆರಾಯ್ಚ್ಚಿನಿ ಮುರೈಗಳ್ 1980
ಡಾ॥ ಮುತ್ತುಷಣ್ಮುಗಮ್, ಡಾ॥ ಸು. ವೆಂಕಟರಾಮ್, ಪ್ರ : ಮುತ್ತುಪದಿಪ್ಪಗಮ್, ಆಳ್ವಾರ್ ನಗರ್, ಮದುರೈ - 625 019

2. ಆಯ್ವುಕ್ಕಟ್ಟುರೈ ಎಳುದುಮ್ ಮುರೈ 1979
(ಅದೇ ಲೇಖಕರು)

# ಪಾರಿಭಾಷಿಕ ಪದಕೋಶ

## (Technical Terminology)

ಅಡಿಟಿಪ್ಪಣಿ/Foot notes
ಅಧಿಕೃತ/Authentic
ಅನಿಯಮಿತ/Unlimited
ಅನಿಸಿಕೆ/Cause to say
ಅನು ಆಕರ/Secondary Source
ಅನುಬಂಧ/Appendix
ಅನುಸರಣೆ/Following
ಅನ್ವೇಷಣೆ/Investigation
ಅಪವ್ಯಯ/Unnecessasy Expense
ಅಪ್ರಕಟಿತ/Un-published
ಅಮೂರ್ತ/Abstract
ಅರಚಿತ/Unstructured
ಅವಲೋಕನ/Observation
ಅವೈಯಕ್ತಿಕ/Impersonnal
ಆಕರ/Source
ಆಧಾರ ಮಾಹಿತಿ/Supporting Reference
ಆರಾಯ್ಕೆ(ತ)/Research
ಉಚ್ಚಾರಣೆ/Pronunciation
ಉದ್ದೇಶಿತ ಸಂದರ್ಶನ/Planned Interview
ಉದ್ಧರಣ/Reference Quotation
ಉದ್ಧೃತ/Quoted
ಉಪಸಂಹಾರ/Conclusion
ಊಹನೆ/Guess Work
ಋಣಾಂಶ/Acknowledgement
ಏಕಪಕ್ಷೀಯ/One sided
ಕರಾರುವಾಕ್ಕು/Promising statement

ಕ್ಷೇತ್ರಕಾರ್ಯ/Field work
ಗವೇಷಣ(ಮ)/Research
ಗ್ರಂಥಪಾಲಕ/Librarian
ಗ್ರಂಥಸೂಚಿ/Bibliographp
ಗ್ರಹಿಕೆ/Way of understanding
ಘಟಕ/Factor,Unit
ಘಟನಾ ಪರಂಪರೆ/Incidents
ಚಿಕಿತ್ಸಕ ದೃಷ್ಟಿ/Clinical approach
ಚಿತ್ತವೃತ್ತಿ/Mentat State
ಚೌಕಟ್ಟು/Outline
ಜಾನಪದ/Folklore
ಟಿಪ್ಪಣಿ/Notes
ತರ್ಕಬದ್ಧ/Logical Orientation
ತಾಡವೋಲೆ/Palmleaf
ತಾಂತ್ರಿಕ/Technical
ತಿದ್ದುಪಡಿ/Correction Errata
ತೌಲನಿಕ/Comparative
ತಂತ್ರಜ್ಞ/Technician
ದಾಖಲೆ/Record
ದೂರಮಿತಿ/Distance limit
ದಿಢೀರ್ ಸಂದರ್ಶನ/Spot interview
ಧೋರಣೆ/Trend
ಧ್ವನಿ ಮುದ್ರಣ, ಸಂಗ್ರಹ/Recorded Voice
ನಕಲು/Copy
ನಿಕಷ/Testing aid
ನಿಬಂಧ/Thesis
ನಿಯತಕಾಲಿಕ/Periodical
ನಿಯಮ ರಹಿತ/Unlimited
ನಿಯಮಿತ/Limited
ನಿಯಮಬದ್ಧ/According to the rules
ನಿಯಂತ್ರಣ/Control

ಪರಿಕರMaterial s
ಪರಿಕಲ್ಪನೆ/Related idea
ಪರಿಧಿ/Zone Circumference
ಪರಿಮಿತಿ/Limitation
ಪರಿಪೂರ್ಣ/Complete
ಪರಿಪೂರ್ಣ ಕಲ್ಪನೆ/Perfect Plan
ಪರಿಶೀಲನೆ/Observation
ಪರಿಷ್ಕೃತ/Refined
ಪರ್ಯಾಯ ಪದ/Alternative Coinage
ಪಕ್ಷಪಾತ/Bias
ಪುನರಾವೃತ್ತಿ/Repitition
ಪೂರ್ವ ಕಲ್ಪನೆ/Hypothesis
ಪೂರ್ವನಿಯೋಜಿತ/Pre planned
ಪೂರ್ವಭಾವೀ ಸಿದ್ಧತೆ/Prior preparation
ಪೂರ್ವ ಮಾಹಿತಿ/Pre-information
ಪೋಷಕ/Supporting
ಪ್ರಜ್ಞಾವಂತ/Conscious
ಪ್ರತಿಕ್ರಿಯೆ/Response
ಪ್ರತಿಪಾದನೆ/Argument
ಪ್ರಬಂಧ/Essay
ಪ್ರಯೋಗಾತ್ಮಕ/Experimental
ಪ್ರಶ್ನೆಮಾಲಿಕೆ/Questionnrre
ಪ್ರವೃತ್ತಿ/Proceedings
ಪ್ರಾಚ್ಯವಸ್ತು ಪತ್ರಾಗಾರ/Archives
ಪ್ರಾತ್ಯಕ್ಷಿಕ/Practical
ಪ್ರಾಥಮಿಕ ಕಲ್ಪನೆ/Primary hypothesis
ಪ್ರಾಮಾಣಿಕ/Honest
ಪ್ರೌಢ/Proficient
ಬೆರಳಚ್ಚು/Typewriting
ಮಾನಸಿಕ ತಯಾರಿ/Mental Preparation

ಮಾಹಿತಿ/Information
ಮಾರ್ಗದರ್ಶಕ, ದರ್ಶಿ/Guide, Supervisor
ಮೂಲ ಆಕರ/Basic Source
ಮೂಲಭೂತ/Fundamental
ಮೌಖಿಕ/Oral
ಮೌಲ್ಯ/Value
ಮೌಲ್ಯಮಾಪನ/Evaluation
ರಚಿತ/Structured
ರುಜುವಾತು/Evidence
ರೂಪರೇಷೆ/Outline
ಲಿಖಿತ ಆಧಾರ/Written document
ವರ್ಗೀಕರಣ/Classification
ವಲಯ/Region
ವಸ್ತುಸ್ಥಿತಿ/Factual
ವಿಚಾರಧಾರೆ/Flow of investigation
ವಿಚಾರ ಸಂಕಿರಣ/Seminar
ವಿಧಾನಶಾಸ್ತ್ರ/Methodology
ವಿಧಿವಿಧಾನ/Formula
ವಿನ್ಯಾಸ/Design
ವಿವರಣಾತ್ಮಕ ಸೂಚಿ/Descriptive Catalogue
ವಿಶ್ಲೇಷಣೆ/Analysis
ವಿಶ್ವಕೋಶ/Encyclopaedia
ವಿಸ್ತೃತಾರ್ಥ/Extended meaning
ವೈಜ್ಞಾನಿಕ/Scientific
ವೈಯಕ್ತಿಕ/Personnal
ವೈಯುಕ್ತಿಕ ದೃಷ್ಟಿಕೋನ/Personnal view
ವ್ಯಕ್ತಿ ಘನತೆ/Individual merit
ವ್ಯತ್ಯಸ್ತ/Difference
ವ್ಯಾಪ್ತಿ/Limitation
ಶಿಷ್ಯ ವೇತನ/Felloship, Studentship
ಶೀರ್ಷಿಕೆ/Title

ಸಂಕೀರ್ಣ/Complex
ಸಂದರ್ಶನ/Interview
ಸಂಭಾವನಾ ಗ್ರಂಥ/Commemoration Volume
ಸಂಭಾವನೆ/Remuneration
ಸಂಶೋಧನೆ/Research
ಸಂಶೋಧನಾ ವಿನ್ಯಾಸ/Research design
ಸಂವಾದಿ/Equivalent
ಸಂಕ್ಷೇಪ ಚಿಹ್ನೆಗಳು/Abbreviations
ಸಮಕಾಲೀನ/Contemporary
ಸಮಗ್ರದೃಷ್ಟಿ/Total View
ಸಮಯಪ್ರಜ್ಞೆ/Timely Consciousnes
ಸಮಯ ಸ್ಫೂರ್ತಿ/Timely inspiration
ಸಮರ್ಪಕ/Suitable
ಸಮಸ್ಯೆ/Problem
ಸರಳೀಕರಣ/Simplification
ಸಮೀಕ್ಷೆ/Survey
ಸಾಂಕೇತಿಕ/Symbolic
ಸಾಮಗ್ರಿ ಸಂಗ್ರಹ/Material Collection
ಸಾರ್ವಕಾಲಿಕ/Universal
ಸಾಹಿತ್ಯ ವಾರ್ಷಿಕ/Literary Annals
ಸಿದ್ಧಾಂತ ಸತ್ಯ/Theoretical Fact
ಸೂತ್ರ/Theory
ಸೂತ್ರಬದ್ಧ/Perfect oriented
ಸೇರ್ಪಡೆ/Addition
ಸ್ನಾತಕ ಪದವಿ/Post Graduation
ಸ್ವರೂಪ/Form
ಹಸ್ತಪ್ರತಿ/Manuscript

—

ಆಯ್ದುಕೊಂಡ ಒಂದು ವಿಷಯದ ಬಗ್ಗೆ ಅನೇಕ ಮೂಲಗಳಿಂದ ವಿಷಯ ಸಂಗ್ರಹಿಸಿಕೊಂಡು ತನ್ನ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಪರಾಮರ್ಶೆ ಮಾಡಿ ತರ್ಕಬದ್ಧವಾಗಿ ವಿಷಯ ಪ್ರತಿಪಾದನೆ ಮಾಡುವುದು ಸಂಶೋಧಕನ ಮುಖ್ಯ ಗುಣ. ಸಂಶೋಧಕ ಅನುಸರಿಸಬೇಕಾದ ಮಾರ್ಗ, ವಿಷಯ ಸಂಗ್ರಹಿಸುವ ವಿಧಾನ, ನಿಬಂಧ ರಚನೆ ಮಾಡುವ ರೀತಿ-ನೀತಿ ಮುಂತಾದ ಹಲವಾರು ಮೂಲಭೂತ ಅಂಶಗಳನ್ನು ಸರಳವಾಗಿ ಹೇಳುವ ಪುಸ್ತಕಗಳು ಕನ್ನಡದಲ್ಲಿ ಇಲ್ಲವೇ ಇಲ್ಲ. ಇಂತಹ ಸನ್ನಿವೇಶದಲ್ಲಿ ಡಾ॥ ಕುಲಕರ್ಣಿ ಮತ್ತು ಅವರ ಗೆಳೆಯರು ಸಂಶೋಧನಾ ಕ್ಷೇತ್ರವನ್ನು ಹೊಸತಾಗಿ ಪ್ರವೇಶಿಸುವವರಿಗೆ ಉಪಯುಕ್ತ ಮಾಹಿತಿಗಳನ್ನು ನೀಡುವ ಕೃತಿಯನ್ನು ಹೊರತಂದು ಸಹಾಯ ಮಾಡಿದ್ದಾರೆ. ಕನ್ನಡದಲ್ಲಿ ಉತ್ತಮ ಸಂಶೋಧಕರು ಇರುವುದು ನಿಜವಾದರೂ ಸಂಶೋಧನ ವಿಧಾನ ವನ್ನು ಕುರಿತು ತಿಳಿಸುವವರು ತುಂಬ ಕಡಿಮೆ. ತಮಿಳು, ಮಲೆಯಾಳಂ, ತೆಲುಗು ಮತ್ತು ಇಂಗ್ಲೀಷ್ ಕೃತಿಗಳನ್ನು ತೌಲನಿಕ ಅಧ್ಯಯನ ಮಾಡಿ ಸಂಶೋಧನೆಯ ಆರಂಭದಿಂದ ಅಂತ್ಯದವರೆಗೆ ಅನುಸರಿಸಬೇಕಾದ ರೀತಿ-ನೀತಿಗಳನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ. ಅವರ ಯತ್ನ ನಿರೀಕ್ಷಿತ ಫಲ ನೀಡಿ ಅವರು ಇನ್ನೂ ಉಪಯುಕ್ತ ಕೃತಿಗಳನ್ನು ನೀಡುವರೆಂದು ಆಶಿಸುತ್ತೇನೆ.

—ಡಾ॥ ಬಿ. ಎಸ್. ಸುಬ್ಬರಾವ್